KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವಂಬರ್ ೩೦, ೨೦೦೬ (ಮಾರ್ಗಶಿರ ೯ ಶಕವರ್ಷ ೧೯೨೮) | ಸಂಚಿಕೆ ೪೭ |
|---|---|---|

## ಭಾಗ - ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ**

**ಟೆಂಡರ್ ಅವಧಿ ವಿಸ್ತರಣೆ**

**ಕ್ರ.ಸಂ. ಸನೀವಿ/ ಬೆಳಗಾವಿ/ ಜೆ.ಇ./ ಟೆಂಡರ್/ 06-07/ 2740, ದಿನಾಂಕ:9ನೇ ನವಂಬರ್, 2006**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ: ಸನಿವಿ/ ಬೆಳಗಾವಿ/ ಜೆಇ/ ಟೆಂಡರ್/ 05-06/ 2426, ದಿನಾಂಕ:22.09.2006ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ.ಸಂ. | ಕೆಲಸದ ಹೆಸರು |
|---|---|
| 1. | ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಹತ್ತಿರ ಸಣ್ಣ ನೀರಾವರಿ ಕೆರೆ ಏರಿಯ ಕುಸಿದ ಭಾಗದ ನಿರ್ಮಾಣ ಹಾಗೂ ಬಾಕಿ ಕೆಲಸ (ಕಾಲುವೆಗಳ ನಿರ್ಮಾಣ ಮಾತ್ರ) |

1. ಖುಲ್ಲಾ ಟೆಂಡರ್ ಫಾರ್ಮಗಳನ್ನು ನೀಡುವ ದಿನಾಂಕ: : 16.12.2006
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: : 22.12.2006 ಸಂಜೆ 4.00 ಗಂಟೆಯವರೆಗೆ

(ಸಾಧ್ಯವಾದಲ್ಲಿ ಟೆಂಡರನ್ನು ಅಂದೇ ತೆರೆಯಲಾಗುವುದು)

ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಮನೋಹರ ರಾ. ವಡ್ಡರ**
ಕಾರ್ಯನಿವಾಹಕ ಇಂಜಿನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್.729

**ಕಾರ್ಮಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಾಇ 193 ಎಲ್‌ಇಟಿ 2006, ಬೆಂಗಳೂರು, ದಿನಾಂಕ:13ನೇ ನವಂಬರ್, 2006**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಯನ್ನು ಕಾರ್ಮಿಕ ಅಧಿಕಾರಿ ಹುದ್ದೆಗೆ ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಇ(1)/ 27/ 2006-07/ ಪಿಎಸ್‌ಸಿ ದಿನಾಂಕ:22.07.2006ರ ಅಧಿಸೂಚನೆಯಲ್ಲಿ ನೇಮಕಾತಿಗಾಗಿ ಸರ್ಕಾರಕ್ಕೆ ಕಳೂಹಿಸಿದೆ. ಈ ಆಯ್ಕೆಯು 2005ನೇ ಸಾಲಿಗೆ ಸೇರಿರುತ್ತದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಗಳ ಹೆಸರು ಹಾಗೂ ಮನೆಯ ವಿಳಾಸ ಶ್ರೀ/ ಶ್ರೀಮತಿ | ಜನ್ಮ ದಿನಾಂಕ | ಮೀಸಲಾತಿ |
|---|---|---|---|
| 1. | ಶ್ರೀ ಸಂತೋಷ್ ಹಿಪ್ಪರಗಿ, ಎಂ-11, 149, ಆದರ್ಶನಗರ, ಆಶ್ರಮ ರಸ್ತೆ, ಬಿಜಾಪುರ-586103. | 20.05.1978 | 3ಬಿ |

ಮೇಲ್ಕಂಡ ಅಭ್ಯರ್ಥಿಯನ್ನು ರೂ.5575-125-5700-150-7200-200-8800-260-10620 ವೇತನ ಶ್ರೇಣಿಯ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ. ಈ ಪರೀಕ್ಷಾರ್ಥಿಯ ಪರೀಕ್ಷಾರ್ಥ ಅವಧಿಯು 2 ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಯು ಕಾರ್ಮಿಕ ಅಧಿಕಾರಿ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಅಭ್ಯರ್ಥಿಯು ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಮಲಾ ಕುಮಾರಿ**

ಪಿ.ಆರ್.730 ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**FORM- IV**

**(See Rule-12)**

**NOTICE Dated:8th November, 2006**

It is hereby notified that the undersigned has changed his name from **YALLAPPA VEERABASAPPA GONDALI** to **YALLAPPA SHIVASHARAN PACHANGE.**

PD-205 **YALLAPPA VEERABASAPPA GONDALI**

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-04**

**ಟೆಂಡರ್ ಪ್ರಕಟಣೆ**

**ಸಂ. ತೋಇ:ತೋಬೆ:ಸತೋಅ-3: 37: 2006-07, ದಿನಾಂಕ:17ನೇ ನವಂಬರ್, 2006**

**ವಿಷಯ:** 2006-07ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಿಗೆ ಬೇಕಾಗುವ ಜೈವಿಕ ಮತ್ತು ಸಸ್ಯಧಾರಿತ ಕೀಟ ನಾಶಕಗಳು, ಸಮ್ಮೋಹಕ ಬಲೆ ಮತ್ತು ಲ್ಯೂರ್ಸ್‌ಗಳನ್ನು ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ:** 1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.

2. ಸಂ: ಕೃತೋಇ 396 ತೋಇವಿ 2006 ದಿನಾಂಕ:16.11.2006.

2006-07ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ಸಸ್ಯ ಸಂರಕ್ಷಣೆಯ ಕಾರ್ಯಕ್ರಮಗಳಿಗೆ ಅಗತ್ಯವಿರುವ ಗಾರ್ಲಿಕ್ ಬೇಸ್ಡ್ ಕೀಟನಾಶಕ, ಫಿಶ್ ಆಯಿಲ್ ರೋಸಿನ್ ಸೋಪ್, ಲ್ಯೂರ್ಸ್ ಮತ್ತು ಸಮ್ಮೋಹಕ ಬಲೆಗಳ ಸರಬರಾಜಿಗಾಗಿ ತಯಾರಕರಿಂದ ಮತ್ತು ಅಧಿಕೃತ ಸರಬರಾಜುದಾರರಿಂದ ಟೆಂಡರ್‌ನ್ನು ಕರೆಯಲಾಗಿದೆ. ಟೆಂಡರ್‌ದಾರರು ತಮ್ಮ ಅತೀ ಕಡಿಮೆ ದರಗಳನ್ನು ನಮೂದಿಸಿ ಮೊಹರಾದ ಟೆಂಡರ್‌ನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ "ಜೈವಿಕ/ ಸಸ್ಯಾಧಾರಿತ ಪೀಡೆ ನಾಶಕ/ ಸಮ್ಮೋಹಕ ಬಲೆ/ ಲ್ಯೂರ್ಸ್‌ಗಳ ಪೂರೈಕೆಗೆ ಟೆಂಡರ್ -2006-07" ಎಂದು ನಮೂದಿಸತಕ್ಕದ್ದು. ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.100/- (ರೂ. ಒಂದು ನೂರುಗಳು ಮಾತ್ರ) ಹಣ ನೀಡಿ ದಿನಾಂಕ:16.11.2006 ರಿಂದ 15.12.2006ರ (ಮಧ್ಯಾಹ್ನ 12.00 ಗಂಟೆ) ವರೆಗೆ ಕಛೇರಿಯ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ದಾರರಿಗೆ ಈ ಕೆಳಕಂಡ ಷರತ್ತುಗಳು ಅನ್ವಯಿಸುತ್ತವೆ.

1. ಟೆಂಡರ್‌ದಾರರು ಟೆಂಡರ್ ಜೊತೆಯಲ್ಲಿ ಇ.ಎಂ.ಡಿ. ರೂ.5,000/- ಗಳ ಕ್ರಾಸ್ ಮಾಡಿದ ಡಿ.ಡಿ.ಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಹೆಸರಿನಲ್ಲಿ ಪಡೆದು ಲಗತ್ತಿಸಬೇಕು.
2. ಸರಬರಾಜು ಮಾಡುವ ಸಂಸ್ಥೆಗಳು ನೋಂದಣಿಯಾಗಿರಬೇಕು.
3. ಟೆಂಡರ್‌ದಾರರು ಸಾಮಗ್ರಿಗಳಿಗೆ ಅತಿ ಕಡಿಮೆ ದರವನ್ನು ಎಲ್ಲಾ ತೆರಿಗೆಗಳು ಮತ್ತು ಸಾಗಾಣಿಕೆ ವೆಚ್ಚ ಸೇರಿದಂತೆ ನಮೂದಿಸಬೇಕು.
4. ಟೆಂಡರ್ ಸಲ್ಲಿಸುವವರು ವಿಳಾಸವನ್ನು ಟೆಂಡರಿನಲ್ಲಿ ಸ್ಪಷ್ಟವಾಗಿ ನಮೂದಿಸಬೇಕು ಮತ್ತು ಉತ್ಪಾದಕರಾಗಿರಬೇಕು/ ಅಧೀಕೃತ ಸರಬರಾಜುದಾರರಾಗಿರಬೇಕು.
5. ಯಶಸ್ವಿ ಟೆಂಡರ್‌ದಾರರಿಗೆ ಮುಂಗಡ ಹಣ ಪಾವತಿ ಮಾಡುವುದಿಲ್ಲ, ಯಶಸ್ವಿಯಾದ ಸರಬರಾಜುದಾರರು ವಿವಿಧ ಜಿಲ್ಲೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಸರಬರಾಜು ಆದೇಶ ನೀಡಿದ 7 ದಿನಗಳ ಒಳಗಾಗಿ ಸರಬರಾಜು ಮಾಡಲು ಸಿದ್ಧರಿರಬೇಕು.
6. ಯಶಸ್ವಿ ಸರಬರಾಜುದಾರರು ಮೇಲೆ ತಿಳಿಸಿರುವ ನಿಬಂಧನೆಗಳನ್ನು ದೃಢೀಕರಿಸುವ ಸರಬರಾಜುದಾರರು ಕರಾರು ಒಪ್ಪಿಗೆಯನ್ನು ರೂ.50/- ರ ಬೆಲೆಯ ಛಾಪಾ ಕಾಗದ (ಸ್ಟ್ಯಾಂಪ್ ಪೇಪರ್) ಮೇಲೆ ಬರೆದು ಸಹಿ ಮಾಡಿಕೊಡಬೇಕು.
7. ಹಿಂದಿನ ವರ್ಷಗಳಲ್ಲಿ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಪೂರೈಕೆಯಾಗಿರುವ ವಾರ್ಷಿಕ ವಹಿವಾಟಿನ ಬಗ್ಗೆ ವಿವರ ಸಲ್ಲಿಸಬೇಕು.
8. ಟೆಂಡರ್ ದಾಖಲೆಗಳನ್ನು ವರ್ಗಾಯಿಸುವಂತಿಲ್ಲ.
9. ಭರ್ತಿ ಮಾಡಿದ ಮೊಹರಾದ ಟೆಂಡರ್‌ಗಳನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರಿಗೆ ದಿನಾಂಕ:**15.12.2006ರ ಮಧ್ಯಾಹ್ನ 12.00 ಗಂಟೆ** ಒಳಗಾಗಿ ಸಲ್ಲಿಸಬೇಕು. ಟೆಂಡರ್‌ಗಳನ್ನು ಟೆಂಡರ್ ಸಮಿತಿಯು ದಿನಾಂಕ:**16.12.2006ರಂದು ಬೆಳಿಗ್ಗೆ 11.00 ಗಂಟೆಗೆ** ತೋಟಗಾರಿಕೆ ನಿರ್ದೇಶನಾಲಯದ ಕಿರು ಸಭಾಂಗಣದಲ್ಲಿ ತೆರೆಯಲಾಗುವುದು.
10. ಹೆಚ್ಚಿನ ಮಾಹಿತಿಗಾಗಿ ತೋಟಗಾರಿಕೆ ನಿರ್ದೇಶಕರ ಕಛೇರಿ, ಲಾಲ್‌ಬಾಗ್, ಬೆಂಗಳೂರು ಇವರನ್ನು ಸಂಪರ್ಕಿಸುವುದು.

ಪಿ.ಆರ್.731 ತೋಟಗಾರಿಕೆ ನಿರ್ದೇಶಕರು.

## ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ, ಶಿವಮೊಗ್ಗ ವೃತ್ತ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಕಾಪಾಅ: ಲೋಇ: ಚಿ: ಜೇಇ-4: ನಬಾರ್ಡ್-12: 2006-07, ದಿನಾಂಕ:15ನೇ ನವಂಬರ್, 2006**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಮೊಹರಾದ ಲಕೋಟೆಯ ಮೇಲೆ ಕಾಮಗಾರಿಯ ಹೆಸರುಗಳನ್ನು ಬರೆದಿರುವ **ಐಟಂವಾರು** ಟೆಂಡರುಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಹಾಗೂ ಆ್ಯಕ್ಟ್-2000ರ ಪ್ರಕಾರ ದ್ವಿಪ್ರತಿಗಳಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ. ಈ ಟೆಂಡರ್‌ಗಳನ್ನು ಕೆಳಗೆ ಸಹಿ ಮಾಡಿದವರಿಂದ ಏಕಕಾಲಕ್ಕೆ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಮತ್ತು ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ ಇವರ ಕಾರ್ಯಾಲಯದಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳ ಎದಿರು ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4-00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರುಗಳನ್ನು ಈ ಕೆಳಗೆ ಸಹಿ ಮಾಡಿರುವವರು **ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನ** ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿದ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿರುವ ಅವಧಿ ಮಳೆಗಾಲ ಸೇರಿ | ಕಾಮಗಾರಿಯ ಸ್ವರೂಪ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಚಿತ್ರದುರ್ಗ ತಾಲ್ಲೂಕಿನ ಚಿಕ್ಕಾಲಗಟ್ಟ-ಕೋಣನೂರು ಮಾರ್ಗ ದೊಡ್ಡಾಲಗಟ್ಟ ರಸ್ತೆಯ ಅಭಿವೃದ್ಧಿ (ಎರಡನೇ ಹಂತ) | 45.00 | 45000-00 | 5000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 2. | ಚಳ್ಳಕೆರೆ ತಾಲ್ಲೂಕಿನ ಮೀರಸಾಬಿಹಳ್ಳಿ-ಜಾಜೂರು, ಓಬಳಾಪುರ ರಸ್ತೆಯಿಂದ ದೊಡ್ಡಉಳ್ಳಾರ್ತಿ ಮಾರ್ಗ ಕಾಲುವೇಹಳ್ಳಿ ರಸ್ತೆಯ ಅಭಿವೃದ್ಧಿ. | 40.00 | 40000-00 | 5000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 3. | ಹೊಳಲ್ಕೆರೆ ತಾಲ್ಲೂಕಿನ ಸಿಂಗೇನಹಳ್ಳಿಯಿಂದ ಕುಮುಟ-ಕಡಮಡಿಗೆ ರಸ್ತೆ ಮಾರ್ಗ ತಾಳಿಕಟ್ಟೆ, ದೊಗ್ಗನಾಳ್, ರಾಮಗಟ್ಟ ಹಿರೇಎಮ್ಮಿಗನೂರು, ನಂದಿಹಳ್ಳಿ ರಸ್ತೆಯ ಅಭಿವೃದ್ಧಿ (ಒಂದನೇ ಹಂತ) | 49.90 | 49900-00 | 5000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 4. | ಹೊಳಲ್ಕೆರೆ ತಾಲ್ಲೂಕಿನ ದಾವಣಗೆರೆ-ಹೊಳಲ್ಕೆರೆ ರಸ್ತೆಯಿಂದ ವೀರಭದ್ರ ಸ್ವಾಮಿ ದೇವಸ್ಥಾನ ಮಾರ್ಗ ಗುಂಜನೂರು, ಕಡೂರು ರಸ್ತೆಯ ಅಭಿವೃದ್ಧಿ. | 49.90 | 49900-00 | 5000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 5. | ಚಿತ್ರದುರ್ಗ ತಾಲ್ಲೂಕಿನ ಹಳೇರಂಗಾಪುರ-ಅಳಗವಾಡಿ ಮಾರ್ಗ ಸೀಗೇಹಳ್ಳಿ, ಹೊಸರಂಗಾಪುರ ರಸ್ತೆಯ ಅಭಿವೃದ್ಧಿ. | 55.00 | 55000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 6. | ಚಿತ್ರದುರ್ಗ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ-4 ರಿಂದ ಯಳಗೋಡು ರಸ್ತೆಯ ಅಭಿವೃದ್ಧಿ. | 60.00 | 60000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 7. | ಚಳ್ಳಕೆರೆ ತಾಲ್ಲೂಕಿನ ಕೆ.ಕೆ. ರಸ್ತೆಯಿಂದ ನಾರಾಯಣಪುರ ಮಾರ್ಗ ಕಸ್ತೂರಿ ತಿಮ್ಮನಹಳ್ಳಿ, ದೇವರಮರಿಕುಂಟೆ ರಸ್ತೆಯ ಅಭಿವೃದ್ಧಿ. | 80.00 | 80000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 8. | ಚಿತ್ರದುರ್ಗ ತಾಲ್ಲೂಕಿನ ಜಾನುಕೊಂಡ-ಬುರುಜನರೊಪ್ಪ ರಸ್ತೆಯಿಂದ ಉಪ್ಪನಾಯಕನಹಳ್ಳಿ ರಸ್ತೆಯ ಅಭಿವೃದ್ಧಿ. | 80.00 | 80000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 9. | ಹಿರಿಯೂರು ತಾಲ್ಲೂಕಿನ ಗೂಳ್ಯ-ಹರಿಯಬ್ಬೆ ರಸ್ತೆಯ ಅಭಿವೃದ್ಧಿ. | 65.00 | 65000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 10. | ಹಿರಿಯೂರು ತಾಲ್ಲೂಕಿನ ಹಿಂಡಸಕಟ್ಟೆಯಿಂದ ಶೇಷಪ್ಪನಹಳ್ಳಿ ರಸ್ತೆಯ ಅಭಿವೃದ್ಧಿ (ಎರಡನೇ ಹಂತ). | 60.00 | 60000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 11. | ಹಿರಿಯೂರು ತಾಲ್ಲೂಕಿನ ಜವನಗೊಂಡನಹಳ್ಳಿ- ದೊಡ್ಡಕಟ್ಟೆ ಮಾರ್ಗ ಕುಂದಲಗುರ ರಸ್ತೆಯ ಅಭಿವೃದ್ಧಿ (ಒಂದನೇ ಹಂತ). | 70.00 | 70000-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 12. | ಹೊಸದುರ್ಗ ತಾಲ್ಲೂಕಿನ ಹೆಚ್.ಎ. ರಸ್ತೆಯಿಂದ ಬೋಕಿಕೆರೆ- ಚೌಳಹಿರಿಯೂರು ರಸ್ತೆಗೆ ಸೇರುವ ರಸ್ತೆ ಮಾರ್ಗ ಕೆಲ್ಲೋಡು, ಕೊರಟಿಗೆರೆ ರಸ್ತೆಯ ಅಭಿವೃದ್ಧಿ (ಒಂದನೇ ಹಂತ) | 99.90 | 99900-00 | 8000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |
| 13. | ಚಳ್ಳಕೆರೆ ತಾಲ್ಲೂಕಿನ ದೇವರೆಡ್ಡಿಹಳ್ಳಿ- ಬೇಡರೆಡ್ಡಿಹಳ್ಳಿ- ಮನ್ನೇಕೋಟೆ- ತಳಕು ರಸ್ತೆಯ ಅಭಿವೃದ್ಧಿ. | 140.00 | 140000-00 | 10000-00 + ತೆರಿಗೆ | ಒಂದನೇ ದರ್ಜೆ | 9 (ಒಂಭತ್ತು) ತಿಂಗಳು | ಡಬ್ಲ್ಯೂ.ಬಿ.ಎಂ. ಮತ್ತು ಮಿಕ್ಸ್‌ಸೀಲ್ |

**ಟೆಂಡರ್ ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ:**

1) ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿ ಸಲ್ಲಿಸುವ ಕಡೆಯ ದಿನಾಂಕ : 14.12.2006 (ಕಛೇರಿ ಕೆಲಸದ ವೇಳೆಯಲ್ಲಿ)

2) ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: : 16.12.2006 ರಿಂದ 19.12.2006 ವರೆಗೆ (ಕಛೇರಿ ಕೆಲಸದ ವೇಳೆಯಲ್ಲಿ)

3) ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸುವ ಕಡೆಯ ದಿನಾಂಕ : 21.12.2006 ಸಂಜೆ 4.00 ಗಂಟೆಯವರೆಗೆ.

4) ಮೊಹರಾದ ಟೆಂಡರ್‌ಗಳನ್ನು ತೆರೆಯುವ ದಿನಾಂಕ : 21.12.2006 ಸಂಜೆ 5.00 ಗಂಟೆಗೆ.

**ಕ್ರಮ ಸಂಖ್ಯೆ: 5 ರಿಂದ 13ರ ವರೆಗಿನ ಕಾಮಗಾರಿಗಳ ಟೆಂಡರ್‌ಗಳನ್ನು ದ್ವಿ ಲಕೋಟೆ ಪದ್ಧತಿಯಲ್ಲಿ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್) ಆಹ್ವಾನಿಸಲಾಗಿದೆ.**

1) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

2) ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್-'ಬಿ' ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ ಮೊಹರು ಮಾಡಿರುವ ಟೆಂಡರ್‌ಗಳನ್ನು ಮೇಲೆ ನಿಗದಿಪಡಿಸಿದ ದಿನಾಂಕದಂದು ಸಲ್ಲಿಸುವುದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು ಮತ್ತು ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

**ಕ್ರಮ ಸಂಖ್ಯೆ: 1 ರಿಂದ 4 ರ ವರೆಗಿನ ಕಾಮಗಾರಿಗಳ ಟೆಂಡರ್‌ಗಳನ್ನು ಏಕ ಲಕೋಟೆ ಪದ್ಧತಿಯಲ್ಲಿ (ಆರ್ಥಿಕ ಬಿಡ್) ಆಹ್ವಾನಿಸಲಾಗಿದೆ.**

**ನಿಬಂಧನೆಗಳು:**

1. ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಯಂತ್ರೋಪಕರಣ ಮತ್ತು ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
2. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು.
3. ಸತತವಾಗಿ 3 ಬಾರಿ ಖಾಲಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್‌ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
4. ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
5. ಗುತ್ತಿಗೆದಾರರು ಕಾರ್ಯಾದೇಶ ಪತ್ರ ಸ್ವೀಕರಿಸಿದ ಒಂದು ವಾರದೊಳಗೆ ಗುತ್ತಿಗೆ ಕರಾರು ಮಾಡಿಕೊಳ್ಳದಿದ್ದಲ್ಲಿ ಅಥವಾ ಗುತ್ತಿಗೆ ಕರಾರನ್ನು ಮಾಡಿಕೊಂಡ ನಂತರ ಒಂದು ವಾರದೊಳಗೆ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ ಹೊಣೆ ಮತ್ತು ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ರದ್ದುಪಡಿಸಿ ಇ.ಎಂ.ಡಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
7. ಗುತ್ತಿಗೆದಾರರು ನಿರ್ವಹಿಸಿದ ಕಾಮಗಾರಿಯನ್ನು **ಎರಡು ವರ್ಷದವರೆಗೂ** ಸುಸ್ಥಿತಿಯಲ್ಲಿ ಅವರ ವೆಚ್ಚದಲ್ಲಿ ಕಾಪಾಡತಕ್ಕದ್ದು.
8. ಗುತ್ತಿಗೆದಾರರು ಟೆಂಡರ್ ಫಾರಂನಲ್ಲಿ ಎಲ್ಲಾ ಪುಟಗಳನ್ನು ಸರಿಯಾಗಿ ತುಂಬಿ ಸಹಿ ಮಾಡಿ ಸಲ್ಲಿಸತಕ್ಕದ್ದು ಮತ್ತು ಗುತ್ತಿಗೆದಾರರು ಇಲಾಖಾ ನಿಯಮಗಳಿಗೆ ಬದ್ಧರಾಗಿರಬೇಕು.
9. ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ, ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಮೇಲ್ಕಂಡ ಕಾಮಗಾರಿಗಳಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ ಕಾಮಗಾರಿಗಳ ಒಟ್ಟು ಮೊತ್ತದ ಶೇಕಡಾ 30ಕ್ಕೆ ಕಡಿಮೆ ಇಲ್ಲದಂತೆ **ಅದೇ ತರಹದ ಒಂದು ಕಾಮಗಾರಿಯನ್ನು** ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು. **ಇದಕ್ಕೆ ಸಂಬಂಧಿಸಿದಂತೆ ಅನುಭವದ ಪ್ರಮಾಣಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ಸ್ವರೂಪದ ವಿವರಗಳು ಇರತಕ್ಕದ್ದು.**

**ಗುತ್ತಿಗೆದಾರರು ಅರ್ಜಿಯೊಂದಿಗೆ ಈ ಕೆಳಕಂಡ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು, ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ಒದಗಿಸಿದ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಷೆಡ್ಯೂಲ್‌ನ್ನು ನೀಡಲಾಗುವುದು. ಈ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೇ ಇರುವಂತಹ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.**

1. ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ, ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ಮೇಲ್ಕಂಡ ಕಾಮಗಾರಿಗಳಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ ಕಾಮಗಾರಿಗಳ ಒಟ್ಟು ಮೊತ್ತದ ಶೇಕಡಾ 30ಕ್ಕೆ ಕಡಿಮೆ ಇಲ್ಲದಂತೆ ಅದೇ ತರಹದ ಒಂದು ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು. **ಇದಕ್ಕೆ ಸಂಬಂಧಿಸಿದಂತೆ ಅನುಭವದ ಪ್ರಮಾಣಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ಸ್ವರೂಪದ ವಿವರಗಳು ಇರತಕ್ಕದ್ದು.** (ಕ್ರಮಸಂಖ್ಯೆ-1 ರಿಂದ 4ರ ಕಾಮಗಾರಿಗಳಿಗೆ **ಅರ್ಜಿಯೊಂದಿಗೆ ಮತ್ತು ಟೆಂಡರಿನೊಂದಿಗೆ** ಲಗತ್ತಿಸಿ ಸಲ್ಲಿಸತಕ್ಕದ್ದು).
2. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೋಂದಣಿ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು.
3. ಅರ್ಜಿಯ ಜೊತೆಯಲ್ಲಿ ಮುಂಗಡ ಹಣ ಠೇವಣಿ (ಇ.ಎಂ.ಡಿ.) ಯನ್ನು ಷೆಡ್ಯೂಲ್ಡ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್/ ಡಿಪಾಜಿಟ್ ಕಾಲ್ ರಿಸೀಪ್ಟ್/ ಬ್ಯಾಂಕ್ ಗ್ಯಾರಂಟಿ ಅಥವಾ ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬೇಕು. ಹಾಗೂ ಇದರ ವ್ಯಾಲಿಡಿಟಿ ಅವಧಿ ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ಅವಧಿ ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗಿರುತ್ತದೆ.
4. ಗುತ್ತಿಗೆದಾರರು ಈ ಹಿಂದೆ ಯಾವುದೇ ಕಾಮಗಾರಿಯನ್ನು ಪೂರ್ಣಗೊಳಿಸದೇ ಮಧ್ಯೆದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೇ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು.
5. ಗುತ್ತಿಗೆದಾರರು ಮೌಲ್ಯ ವರ್ಧಿತ ತೆರಿಗೆ (ವ್ಯಾಟ್) ನೊಂದಣಿ ಪ್ರಮಾಣ ಪತ್ರವನ್ನು ಮತ್ತು ಹಿಂದಿನ ಸಾಲಿನ ಆದಾಯ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಇಲಾಖೆಯಿಂದ ಪಡೆದು ಲಗತ್ತಿಸಬೇಕು.
6. ಗುತ್ತಿಗೆದಾರರು ಮೇಲ್ಕಂಡ ಕಾಮಗಾರಿಗಳಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು. ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದು ಸೂಕ್ತ ದಾಖಲಾತಿಗಳನ್ನು ಅಂದರೆ ಸೇಲ್ ಡೀಡ್, ನೋಂದಣಿ ಪ್ರಮಾಣ ಪತ್ರ, ಡೆಲವರಿ ಇನ್‌ವಾಯ್ಸ್ ಇತ್ಯಾದಿಗಳನ್ನು **ಟೆಂಡರ್‌ನೊಂದಿಗೆ/ ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು. **ಕ್ರಮಸಂಖ್ಯೆ 1 ರಿಂದ 4ರ ಕಾಮಗಾರಿಗಳಿಗೆ ಅರ್ಜಿಯೊಂದಿಗೆ ಮತ್ತು ಟೆಂಡರಿನೊಂದಿಗೆ ಲಗತ್ತಿಸಿ ಸಲ್ಲಿಸತಕ್ಕದ್ದು.**
   1. ಟಿಪ್ಪರ್‌ಗಳು-4 ನಂ.
   2. ಸ್ಟಾಟಿಕ್ ರೋಡ್ ರೋಲರ್ (8:10 ಟನ್ ಸಾಮರ್ಥ್ಯದ) -2 ನಂ.
   3. ಮೆಕ್ಯಾನಿಕಲ್ ಸ್ಪ್ರೇಯರ್-1 ನಂ.
   4. ರಸ್ತೆ ಕಾಮಗಾರಿಗೆ ಅವಶ್ಯಕವಾದ ಯಂತ್ರೋಪಕರಣಗಳನ್ನು ಹೊಂದಿರುವ ಬಗ್ಗೆ ವಿವರ ಸಲ್ಲಿಸತಕ್ಕದ್ದು.
7. ಗುತ್ತಿಗೆದಾರರು ಮೇಲ್ಕಂಡ ಕಾಮಗಾರಿಗಳಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಅಥವಾ ಬಾಡಿಗೆ ಆಧಾರದಲ್ಲಿ ತರುವವರು ಮಾಲೀಕರಿಂದ ಸೂಕ್ತ ಬಾಡಿಗೆ ಕರಾರು ಪತ್ರವನ್ನು ಹಾಗೂ ಮಾಲೀಕರು ಸದರಿ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದು ಸೂಕ್ತ ದಾಖಲಾತಿಗಳೊಂದಿಗೆ ಅಂದರೆ ಸೇಲ್ ಡೀಡ್, ನೊಂದಣಿ ಪ್ರಮಾಣ ಪತ್ರ, ಡೆಲವರಿ ಇನ್‌ವಾಯ್ಸ್ ಇತ್ಯಾದಿಗಳನ್ನು ಲಗತ್ತಿಸತಕ್ಕದ್ದು ಹಾಗೂ ಯಾವುದೇ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಖರೀದಿಸಿದ್ದಲ್ಲಿ, ಆ ಸಂಸ್ಥೆಗೆ ಸದರಿ ಯಂತ್ರೋಪಕರಣಗಳನ್ನು ಅಡ ಇಟ್ಟಿದಲ್ಲಿ, ಆ ಸಂಸ್ಥೆಯಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದು ಈ ಎಲ್ಲಾ ದಾಖಲಾತಿಗಳನ್ನು **ಟೆಂಡರ್‌ನೊಂದಿಗೆ/ ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು ಹಾಗೂ ಹಾಟ್ ಮಿಕ್ಸ್ ಪ್ಲಾಂಟ್ ಸ್ಥಾಪಿಸುವ ಸ್ಥಾವರದ ಸ್ಥಳವನ್ನು ತಪ್ಪದೇ **ಅರ್ಜಿಯೊಂದಿಗೆ** ಹಾಗೂ **ಟೆಂಡರ್‌ನೊಂದಿಗೆ/ ತಾಂತ್ರಿಕ ಬಿಡ್‌ನೊಂದಿಗೆ ನಮೂದಿಸತಕ್ಕದ್ದು. (ಕ್ರಮ ಸಂಖ್ಯೆ: 1 ರಿಂದ 4 ರ ಕಾಮಗಾರಿಗಳಿಗೆ ಅರ್ಜಿಯೊಂದಿಗೆ ಮತ್ತು ಟೆಂಡರಿನೊಂದಿಗೆ ಲಗತ್ತಿಸಿ ಸಲ್ಲಿಸತಕ್ಕದ್ದು).**
   1. 20/30 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್‌ಮಿಕ್ಸ್ ಪ್ಲಾಂಟ್-1 ನಂ.
   2. ಮೆಕ್ಯಾನಿಕಲ್ ಪೇವರ್ ಫಿನಿಷರ್-1 ನಂ.

**ಸೂಚನೆ:** 1) ಗುತ್ತಿಗೆದಾರರು ಸದರಿ ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪತ್ರಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

2) ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

3) ತಾಂತ್ರಿಕ ಬಿಡ್‌ನೊಂದಿಗೆ ಲೈನ್ ಆಫ್ ಕ್ರೆಡಿಟ್‌ನ್ನು **'ಫಾರಂ -7'** ರಲ್ಲಿ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ತಾಂತ್ರಿಕ ಬಿಡ್‌ನ್ನು ತಿರಸ್ಕರಿಸಲಾಗುವುದು.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್.732 ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ.

## ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಉನಿ: ಕಉ: ವಿನಿ2: ಬಿಜಿಟಿ: 48: 2006-07, ದಿನಾಂಕ:6ನೇ ನವಂಬರ್, 2006**

ವಿಧಾನಸೌಧದ ಪಕ್ಕದಲ್ಲಿರುವ ವಿಕಾಸಸೌಧದ ಆವರಣದಲ್ಲಿ ಭೂವಿನ್ಯಾಸಗೊಳಿಸಿ ಉದ್ಯಾನವನವನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಭೂದೃಶ್ಯ ವಿಭಾಗ ಲಾಲ್‌ಬಾಗ್, ಬೆಂಗಳೂರು ರವರ ಅಂದಾಜು ಪಟ್ಟಿಯಂತ ವಿನ್ಯಾಸಗೊಳಿಸಬೇಕಾಗಿರುತ್ತದೆ. ಈ ಬಗ್ಗೆ ಅಧಿಕೃತ/ ಸಂಸ್ಥೆ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಛಿಸುವವರು ಈ ಕೆಳಗೆ ತಿಳಿಸಿದ ವಿವರಗಳ ರೀತಿ ಟೆಂಡರ್‌ಗಳನ್ನು ದಿನಾಂಕ:01.12.2006 ರಿಂದ 05.12.2006 ಸಂಜೆ 5.00 ಈ ಕಛೇರಿಯಿಂದ ಪಡೆಯಬಹುದು.

| | ವಿವರಗಳು | ಪ್ರಮಾಣ |
|---|---|---|
| 1. | **1. ಭೂಮಿ ಕೆಲಸ:**<br>ಸ್ಥಳ ಸ್ವಚ್ಛಗೊಳಿಸುವಿಕೆ/ ಕುರುಚಲು ತೆಗೆದು ಹಾಕುವುದು. | |
| (ಎ) | ದಟ್ಟವಾಗಿ ಬೆಳೆದ ಕುರುಚಲು ಗಿಡಗಳನ್ನು ಕತ್ತರಿಸಿ ತೆಗೆದು ಹಾಕುವುದು (0.25 ಮೀ. ದಪ್ಪವಾದ ಗಿಡಗಳು ಸೇರಿದಂತೆ) ಹಾಗೂ ಪೊದೆಗಳನ್ನು ಬೇರು ಸಮೇತ ಕಿತ್ತು ಹಾಕುವುದು 1.50 ಮೀ. ಎತ್ತರ ಹಾಗೂ 50 ಮೀ. ದೂರದಲ್ಲಿ ಬಿಸಾಡುವುದು. | |
| (ಬಿ) | ತೆಳುವಾಗಿ ಬೆಳೆದ ಕುರುಚಲು ಗಿಡಗಳನ್ನು ಕತ್ತರಿಸಿ ತೆಗೆದುಹಾಕಿ, ಬೇರು ಸಮೇತ ಕಿತ್ತು ಹಾಕುವುದು. 1.50 ಮೀ. ಎತ್ತರ ಹಾಗೂ 50 ಮೀ. ದೂರದಲ್ಲಿ ಬಿಸಾಡುವುದು. | |
| (ಸಿ) | ಇತರೆ ದಟ್ಟವಾಗಿ ಬೆಳೆದ ಕುರುಚಲು ಗಿಡಗಳನ್ನು ಕತ್ತರಿಸುವುದು | 1597.5 ಘ.ಮೀ. |
| 2. | **ಪೊದೆಗಳನ್ನು ಬೆಳೆಸುವುದು:**<br>0.45 ಮೀX 0.45 ಮೀ. X 0.45ಮೀ. ಆಳತೆಯ ಗುಣಿಗಳನ್ನು ಶೇಕಡಾ 50ರಷ್ಟನ್ನು ತೋಡಿ ತೆಗೆದ ಮೇಲ್ಮಣ್ಣಿನಿಂದ ಮುಚ್ಚುವುದು ಹಾಗೂ ಉಳಿದ ಶೇಕಡಾ 50ರಷ್ಟನ್ನು 1:2:3:ರ ಪ್ರಮಾಣದಲ್ಲಿ ಮರಳು 0.007 ಘನ. ಮೀ. ಕೊಟ್ಟಿಗೆ ಗೊಬ್ಬರ 0.014 ಘನ ಮೀಟರ್ ಕೆಂಪು ಮಣ್ಣನ್ನು 0.021 ಘನ ಮಿಶ್ರಣದಿಂದ ತುಂಬುವುದು ಹಾಗೂ ಚೆನ್ನಾಗಿ ಬೆಳೆದ ಗಿಡಗಳನ್ನು ನೆಡುವುದು. (ಗಿಡದ ಬೆಲೆ ಮತ್ತು ಸಾಮಗ್ರಿ ಬೆಲೆ ಹೊರತುಪಡಿಸಿ). | |
| (ಎ) | ಸಾಧಾರಣ ಮಣ್ಣು | 2000 ಸಂ. |
| (ಬಿ) | ವಿವಿಧ ತಳಿಯ ಹೂ ಜಾತಿಯ ಗಿಡಗಳು | 2000 ಸಂ. |
| (ಸಿ) | [exotic plants] ಸೈಕಸ್, ಫೈಕಸ್, ಸ್ಕಾರ್‍ಲೆಟ್, ಫಿಯೋನಿಕ್ಸ್, ಇತರೆ [big size] 5' mt ht | 100 ಸಂ. |
| 3. | **ಹೆಡ್ಜಗಳನ್ನು ಬೆಳೆಸುವುದು:**<br>0.45 ಮೀ. X0.45ಮೀ. ಆಳತೆಯ ಸಣ್ಣ ಕಾಲುವೆಗಳನ್ನು ತೋಡಿ, ಶೇ. 50ರ ಪ್ರದೇಶವನ್ನು ಅಗೆತ ಮಾಡಿದ ಮೇಲ್ಮಣ್ಣು ಹಾಗೂ ಉಳಿದ ಶೇ.50ರಷ್ಟನ್ನು 1:2:3:ರ ಪ್ರಮಾಣದಲ್ಲಿ ಮರಳು 0.0112 ಘನ. ಮೀ. ಕೊಟ್ಟಿಗೆ ಗೊಬ್ಬರ 0.0224 ಘನ ಮೀಟರ್ ಕೆಂಪು ಮಣ್ಣ 0.0336 ಘನ ಮಿಶ್ರಣವನ್ನು ಬೆರೆಸುವುದು ಹಾಗೂ ಚೆನ್ನಾಗಿ ಬೆಳೆದ ಗಿಡವನ್ನು ನೆಡುವುದು ಗಿಡದ ಬೆಲೆಯನ್ನು ಹೊರತುಪಡಿಸಿ. | |
| (ಎ) | ಸಾಧಾರಣ ಮಣ್ಣು | 1000 Rmt |
| (ಬಿ) | ಪ್ರತಿ ಆರ್.ಎಂ.ಟಿ. ಐದು ಸಂಖ್ಯೆ ಗಿಡಗಳು | 5000 ಸಂ. |
| 4. | **ಹೂವಿನ ಮಡಿಗಳನ್ನು ಬೆಳೆಸುವುದು.**<br>0.45 ಮೀ. ಆಳದವರೆಗೆ ಭೂಮಿಯನ್ನು ಅಗೆತ ಮಾಡುವುದು. ಶೇ.50 ಪ್ರದೇಶಕ್ಕೆ ಅಗೆತ ಮಾಡಿದ ಮೇಲ್ಮಣ್ಣು ಹಾಗೂ ಉಳಿದ ಶೇ.50 ರಷ್ಟಕ್ಕೆ 1:2:3: ಪ್ರಮಾಣದಲ್ಲಿ ಮರಳು 0.0375 ಘನ. ಮೀ. ಕೊಟ್ಟಿಗೆ ಗೊಬ್ಬರ 0.075 ಘನ ಮೀಟರ್ ಕೆಂಪು ಮಣ್ಣ 0.112 ಘನ ಮೀ. ಮಿಶ್ರಣದಿಂದ ಹಾಕುವುದು ಹಾಗೂ ಉತ್ತಮ ಗುಣಮಟ್ಟವುಳ್ಳ ರೂಟೆಡ್ ಗಿಡಗಳ ಬೆಲೆಯನ್ನು ಹೊರತುಪಡಿಸಿದೆ. ಮತ್ತು ಬೇವಿನ ಹಿಂಡಿ, ಬೋನ್ ಮೀಲ್, ಜಂಜಲಿ ಎಣ್ಣೆ, ಹೊಂಗೆ ಎಣ್ಣೆ, ಕುದುರೆ ಗೊಬ್ಬರ 1X1X0.45 ಮೀ. ಪ್ರಮಾಣದಲ್ಲಿ ಉಪಯೋಗಿಸುವುದು. | |
| (ಎ) | ಸಾಧಾರಣ ಮಣ್ಣು | 500 ಚ.ಮೀ. |
| (ಬಿ) | ಗಿಡಗಳು | 500 ಸಂ. |
| 5. | **ಗಡ್ಡೆಗಳಿಂದ ಬೆಳೆಯುವ ಹೂವಿನ ಮಡಿ:**<br>**(ಕ್ಯಾನ್, ಸುಗಂದರಾಜ್, ಗ್ಲಾಡಿಯೊಲಸ್ ಇತ್ಯಾದಿ)**<br>0.45 ಮೀ. ಆಳದವರೆಗೆ ಭೂಮಿಯನ್ನು ಅಗೆತ ಮಾಡುವುದು. ಶೇ.50 ಪ್ರದೇಶಕ್ಕೆ ಅಗೆತ ಮಾಡಿದ ಮೇಲ್ಮಣ್ಣು ಹಾಗೂ ಉಳಿದ ಶೇ.50 ರಷ್ಟಕ್ಕೆ 1:2:3: ಪ್ರಮಾಣದಲ್ಲಿ ಮರಳು, 0.0375 ಘ.ಮೀ. ಕೊಟ್ಟಿಗೆ ಗೊಬ್ಬರ 0.075 ಘ.ಮೀ. ಕೆಂಪುಮಣ್ಣು 0.112 ಘ.ಮೀ. ಮಿಶ್ರಣದಿಂದ ಬೆರೆಸುವುದು ಹಾಗೂ ಗಡ್ಡೆಗಳನ್ನು ಈ ಕೆಳಕಂಡ ಅಂತರದಲ್ಲಿ ನೆಡುವುದು. ಕ್ಯಾನ್ ಹಾಗೂ ಸುಗಂಧರಾಜ್ 0.2ಮೀ. X 0.3ಮೀ. ಗ್ಲಾಡಿಯೋಲಸ್ ಮತ್ತು ಇತರೆ 0.2ಮೀ. X 0.2ಮೀ.ಗಿಡಗಳ (ಬೆಲೆಯನ್ನು ಹೊರತುಪಡಿಸಿ) | |
| | ಸಾಧಾರಣ ಮಣ್ಣು | 100 ಚ.ಮೀ. |
| | ಗಡ್ಡೆಗಳ ಸಂಖ್ಯೆ [Avg] 10 | 10000 ಸಂ. |
| 6. | **ಹುಲ್ಲುಹಾಸನ್ನು ಅಭಿವೃದ್ಧಿ ಪಡಿಸುವುದು:** | |
| (ಎ) | **ನೆಲವನ್ನು ಕೆತ್ತುವುದು ಮೇಲ್ಪದರದ ಮಣ್ಣು ತೆಗೆಯುವುದು:**<br>ನೆಲವನ್ನು ಕಿತ್ತಿ ಮೇಲ್ಪದರದ 0.15 ಮೀ. ಮಣ್ಣನ್ನು ತೆಗೆಯುವುದು ಹಾಗೂ ಸಸ್ಯ ಹುಲ್ಲು ಬೇರು ಸಮೇತ ಕಿತ್ತು ತೆಗೆಯುವುದು. 500 ಮೀ. ಪ್ರಾರಂಭಿಕ ಸಾಗಾಣಿ ಮತ್ತು ಉದರಣ ಹಾಗೂ ಹೇರುವ ಇಳಿಸುವ ದರ ಸೇರಿದಂತೆ (1.0x1.0x0.15ಮೀ.) 0.15 ಘನ ಮೀ. | |
| (ಬಿ) | **ಮೊದಲ ಅಗೆತ:**<br>ಲಾನ್ ಹಾಕಲು ಮಣ್ಣನ್ನು ಅಗೆಯುವುದು ಸಸ್ಯ ಹುಲ್ಲು ಇತರೆ ಅನಗತ್ಯ ವಸ್ತು ತೆಗೆದು ಹಾಕುವುದು ಹೆಂಟೆ ಒಡೆಯುವುದು. ನೀರು ಹಾಕುವುದು ಇತ್ಯಾದಿ (1.0 x 1.0 x 0.45 ಮೀ.) 0.45 ಘನ ಮೀ. | |

| ವಿವರಗಳು | | ಪ್ರಮಾಣ |
|---|---|---|
| (ಸಿ) | **ಎರಡೇ ಅಗೆತ:**<br>ಮಣ್ಣನ್ನು ಅಗೆಯುವುದು ಯಾವುದಾದರೂ ಬೇರು ಹುಲ್ಲಿ ಇತ್ಯಾದಿ ಇದ್ದರೆ ತೆಗೆದು ಹಾಕುವುದು ಮಣ್ಣನ್ನು ಮಟ್ಟ ಮಾಡುವುವುದು ಇತ್ಯಾದಿ (1.0 x 1.0 x 0.45 ಮೀ.) 0.45 ಘನ ಮೀ. | |
| (ಡಿ) | ಮರಳು, ಕೆಂಪುಮಣ್ಣನ್ನು 1:3:6: ಪ್ರಮಾಣದಲ್ಲಿ ಒದಗಿಸಿ ಗುಡ್ಡೆ ರೂಪದಲ್ಲಿ ಸಂಗ್ರಹಿಸುವುದು, ಬೇಕಾದ ಕಡೆಯಲ್ಲಿ 7.5 ಸೇ.ಮೀ. ದಪ್ಪದಲ್ಲಿ ಹರಡುವುದು. | |
| | ಮರಳು 0.0075 ಘನ ಮೀ.<br>ಕುದುರೆ ಗೊಬ್ಬರ 0.00225 ಘನ ಮೀ. | |
| (ಇ) | **ಈ ಕೆಳಕಂಡ ರಾಸಾಯನಿಕ ಗೊಬ್ಬರ ಸರಬರಾಜು ಮಾಡುವುದು:** | |
| | ಸೂಪರ್ ಫಾಸ್ಪೇಟ್ 50 ಗ್ರಾಂ/ ಪ್ರತಿ ಚದರ ಮೀಟರ್‌ಗೆ<br>ಬೇವಿನ ಎಣ್ಣೆ ಕೇಕ್ 250 ಗ್ರಾಂ/ ಪ್ರತಿ ಚದರ ಮೀಟರ್‌ಗೆ<br>ಬೋನ್ ಮೀಲ್ 250 ಗ್ರಾಂ/ಪ್ರತಿ ಚದರ ಮೀಟರ್‌ಗೆ<br>ಪೋಟ್ಯಾಶ್ 50 ಗ್ರಾಂ/ಪ್ರತಿ ಚದರ ಮೀಟರ್‌ಗೆ<br>ಫ್ಯೂರಿಡಾನ್ 25 ಗ್ರಾಂ/ಪ್ರತಿ ಚದರ ಮೀಟರ್‌ಗೆ<br>ಅಮೋನಿಯಮ್ ಸಲ್ಫೇಟ್ 100 ಗ್ರಾಂ/ಪ್ರತಿ ಚದರ ಮೀಟರ್‌ಗೆ | |
| (ಎಫ್) | **ಕೂಲಿ ದರ:**<br>ಸಾಮಗ್ರಿಗಳನ್ನು ನಿಗದಿತ ಪ್ರಮಾಣದಲ್ಲಿ ಮಿಶ್ರಣ ಮಾಡಿ, ಹರಡುವುದು, ಗೊಬ್ಬರ ಮತ್ತು ಸಸ್ಯ ಸಂರಕ್ಷಣೆ ಔಷಧಿಗಳ ಸಿಂಪರಣೆ, ಅಗೆಯುವುದು, ಸಮತಟ್ಟುಗೊಳಿಸುವುದು, ಒಳ್ಳೆಯ ಗುಣಮಟ್ಟದ ಲಾನ್ ಹುಲ್ಲಿನಿಂದ ಡಿಬ್ಲಿಂಗ್ ಮಾಡುವುದು 5 x 5 ಸೇ.ಮೀ. ಇತರೆ. | |
| (ಜಿ) | **ಒಳ್ಳೆಯ ಗುಣಮಟ್ಟದ ಲಾನ್ ಹುಲ್ಲು ಸರಬರಾಜು ಮಾಡುವುದು:**<br>ಮೆಕ್ಸಿಕನ್ ಗ್ರಾಸ್ ಟ್ರೆರ್ಫ್ ಹುಲ್ಲು | 4146 ಚ.ಮೀ. |
| 7. | ಉತ್ತಮ ಗುಣಮಟ್ಟದ ಕೆಂಪುಮಣ್ಣನ್ನು ಸರಬರಾಜು ಮಾಡಿ ಗುಡ್ಡೆ ಹಾಕುವುದು ಅಗತ್ಯವಿರುವ ಕಡೆ ಹಳ್ಳ ಇತ್ಯಾದಿಗಳ ಜಾಗದಲ್ಲಿ 11000 ಚದರ ಅಡಿ x 0.3 ಮೀ. ಅಂತರದಲ್ಲಿ ಮಣ್ಣನ್ನು ಮಟ್ಟ ಮಾಡುವುದು. | 1597.5 ಚ.ಮೀ. |
| 8. | ಕೆಂಪುಮಣ್ಣನ್ನು ಹರಡುವುದು ಮತ್ತು ಸಮತಟ್ಟು ಮಾಡುವುದು. | 1597.5 ಚ.ಮೀ. |
| 9. | **ಹುಲ್ಲು ಹಾಸು ನಿರ್ವಹಣೆ:**<br>ಹುಲ್ಲು ಹಾಸು ನಿರ್ವಹಣೆ ನೀರು ಹಾಯಿಸುವುದು, ಕಳೆ ತೆಗೆಯುವುದು 15 ದಿನಗಳಿಗೊಮ್ಮೆ, ಗೊಬ್ಬರ ಹಾಕುವುದು, ಸಸ್ಯ ಸಂರಕ್ಷಣಾ ಔಷಧಿಗಳನ್ನು ಸಿಂಪಡಿಸುವುದು ಲಾನ್ ಮೂವರ್‌ನಿಂದ ಹುಲ್ಲು ಹಾಸುಗಳನ್ನು ಕತ್ತರಿಸುವುದು, ಹಾಗೂ ಹೂವಿನಮಡಿ, ಹೆಡ್ಜ್‌ಗಳನ್ನು ನಿರ್ವಹಣೆ ಮಾಡುವುದು ಇತರೆ. | 3 ತಿಂಗಳು |

**ಷರತ್ತು ಮತ್ತು ನಿಬಂಧನೆಗಳು:**

1. ಭದ್ರತಾ ಠೇವಣಿ ರೂ.50000 ಸಾವಿರ ಬ್ಯಾಂಕ್ ಡಿಮಾಂಡ್ ಡ್ರಾಫ್ಟ್‌ನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್‌ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ಇವರ ಹೆಸರಿನಲ್ಲಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ತಾಂತ್ರಿಕ ಟೆಂಡರ್‌ನೊಂದಿಗೆ ಲಗತ್ತಿಸಬೇಕು.
2. ಮೊಹರಾದ ಟೆಂಡರ್‌ಗಳನ್ನು ದಿನಾಂಕ:06.12.2006 ರಂದು ಸಂಜೆ 5.00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಫಾರಂನ್ನು ದಿನಾಂಕ:01.12.2006 ರಿಂದ 05.12.2006 ಸಂಜೆ 5.00 ಗಂಟೆವರೆಗೆ.
3. ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ಕಛೇರಿಯಿಂದ ಪಡೆಯಬಹುದು.
4. ಮೊಹರಾದ ಟೆಂಡರ್‌ಗಳನ್ನು ದಿನಾಂಕ:06.12.2006 ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು.
5. ಟೆಂಡರ್ ಫಾರಂ ಬೆಲೆ ರೂ.500-00 ಮೊತ್ತವನ್ನು ಪಾವತಿಸಿ ಪಡೆದುಕೊಳ್ಳಬೇಕು.
6. ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿದ ವಿವರಗಳ ರೀತಿ ಉತ್ತಮ ರೀತಿ ಕೆಲಸ ನಿರ್ವಹಿಸಬೇಕು ಮತ್ತು ಕನಿಷ್ಠ ಧರವನ್ನು ನಮೂದಿಸಬೇಕು.
7. ಟೆಂಡರ್ ಸಲ್ಲಿಸುವಾಗ ಸೀಲು ಮಾಡಿದ ಲಕೋಟೆಯಲ್ಲಿ ನೀಡಬೇಕು. ಯಶಸ್ವಿ ಟೆಂಡರ್‌ದಾರರ ಠೇವಣಿ ಬಿಟ್ಟು ಉಳಿದವರ ಠೇವಣಿಗಳನ್ನು ಟೆಂಡರ್ ಪರಿಶೀಲನೆ ನಂತರ K.T.P.P. ಕಾಯ್ದೆಯನ್ವಯ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್‌ನಲ್ಲಿ ಸೂಚಿಸಿದ ಕೆಲಸವನ್ನು ಪೂರ್ಣಗೊಳಿಸಿದ ನಂತರ ಒಂದು ವರ್ಷದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು. ಸರ್ಕಾರದ ನಿಯಮಾವಳಿಯಂತೆ ಆದಾಯ ತೆರಿಗೆ ಮತ್ತು ಕಟಾಯಿಸಲಾಗುವುದು. ನಿಯಮಾನುಸಾರ ಟೆಂಡರ್ ಸಲ್ಲಿಸುವಾಗ "ವಿಕಾಸಸೌಧ ಬಳಿ ಲ್ಯಾಂಡ್‌ಸ್ಕೇಪಿಂಗ್ ಕಾಮಗಾರಿ ಬಗ್ಗೆ ಟೆಂಡರ್" ಎಂದು ಲಕೋಟೆಯ ಮೇಲೆ ನಿಖರವಾಗಿ ಬರೆದು ಸೀಲ್ ಮಾಡಿದ ಲಕೋಟೆಯಲ್ಲಿ ನೀಡಬೇಕು.
8. ಕಾಲಕಾಲಕ್ಕೆ ಅನ್ವಯ ತೆರಿಗೆಗಳಿಗೆ ಟೆಂಡರ್‌ದಾರರು ಬದ್ಧರಾಗಿರಬೇಕು ಹಾಗೂ ಟೆಂಡರ್ ಜೊತೆಯಲ್ಲಿ ರೂ. 50.00 ಲಕ್ಷಕ್ಕೆ ಬ್ಯಾಂಕ್ ಸಾಲ್ವೆನ್ಸಿ ಪತ್ರವನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಲಗತ್ತಿಸಿರಬೇಕು.
9. ಟೆಂಡರ್ ಅನುಮೋದಿಸಿದ 30 ದಿನಗಳ ಒಳಗೆ ಸೂಚಿಸಿರುವ ಕೆಲಸಗಳನ್ನು ಸಂಪೂರ್ಣಗೊಳಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು.
10. ಸದರಿ ಲ್ಯಾಂಡ್ ಸ್ಕೇಪಿಂಗ್ ಕಾಮಗಾರಿಗಳನ್ನು 2003-04, 04-05, 05-06ನೇ ಸಾಲಿನಲ್ಲಿ ರೂ.50.00 ಲಕ್ಷ ಮೌಲ್ಯಕ್ಕೆ ಕಡಿಮೆಯಾಗದ ಕಾಮಗಾರಿಯನ್ನು ಯಾವುದಾದರೂ ಒಂದು ವರ್ಷದಲ್ಲಿ ಪೂರ್ಣಗೊಳೀಸಿದ ಬಗ್ಗೆ ಸಂಬಂಧಪಟ್ಟ ಇಲಾಖೆ/ ಸಂಸ್ಥೆಯಿಂದ ಪಡೆದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
11. ಮೇಲೆ ಹೇಳಿದ ನಿಬಂಧನೆಗಳನ್ನು ಗುತ್ತಿಗೆದಾರರು ದೃಢೀಕರಿಸುವ/ ಕರಾರು ಒಪ್ಪಿಗೆ ಪತ್ರವನ್ನು ರೂ.200-00 ಬೆಲೆಯ ಸ್ಟ್ಯಾಂಪ್ ಪೇಪರ್ ಮೇಲೆ ಬರೆದು ಸಹಿ ಮಾಡಿಕೊಡಬೇಕು.
12. ಯಾವುದೇ ಕಾರಣ ನೀಡದೆ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ.

ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

ಪಿ.ಆರ್.734

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1.**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ: ಕಉ: ವಿನಿ2: ಬಿಜಿಟಿ:40 :2006-07 ದಿನಾಂಕ:10ನೇ ನವಂಬರ್, 2006**

ಕಬ್ಬನ್ ಉದ್ಯಾನವನ ಪ್ರವೇಶ ದ್ವಾರಗಳು ಸೇರಿದಂತೆ ಕಬ್ಬನ್ ಉದ್ಯಾನವನದ ಆಂತರಿಕ ಸಂಪೂರ್ಣ ಭದ್ರತೆ ಸೇವೆಗಳಿಗಾಗಿ ಅಧಿಕೃತ ಸೆಕ್ಯೂರಿಟಿ ಏಜನ್ಸಿಯಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಈ ಮುಂದೆ ಸೂಚಿಸಿರುವ ಭದ್ರತೆ ಕೆಲಸವನ್ನು ನಿರ್ವಹಿಸಲು ಈ ಕಛೇರಿಯ ನಿಬಂಧನೆ ಮತ್ತು ಷರತ್ತುಗಳಿಗೆ ಒಪ್ಪಿದಲ್ಲಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಬಹುದು, ಟೆಂಡರ್ ಫಾರಂಗಳನ್ನು ದಿನಾಂಕ: 6.12.2006 ರಿಂದ 11.12.2006 ವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಒಂದು ಫಾರಂಗೆ ರೂ.500=00 ಪಾವತಿ ಮಾಡಿ ಪಡೆಯಬಹುದು. ಭದ್ರತೆ ಸೇವೆಯನ್ನು ಕನಿಷ್ಠ 21 ಜನ ಸೆಕ್ಯೂರಿಟಿ ಸಿಬ್ಬಂದಿಯನ್ನು (ಒಂದು ಪಹರೆಗೆ 7 ಸಿಬ್ಬಂದಿಯಂತೆ 3 ಪಹರೆಗಳಲ್ಲಿ) ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಸೀಲ್ಡ್ ಮಾಡಿದ ಟೆಂಡರ್‌ಗಳನ್ನು ದಿನಾಂಕ:12.12.2006 ರಂದು ಸಂಜೆ 4.00 ಗಂಟೆಯ ಒಳಗೆ ಈ ಕಛೇರಿಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ದಿನಾಂಕ:12.12.2006 ರಂದು ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ನಿರ್ವಹಿಸಬೇಕಾದ ಭದ್ರತೆ ಸೇವೆಗಳು:**

1. ವರ್ಷದ 365 ದಿನಗಳಲ್ಲಿ 24 ಗಂಟೆಗಳ ಸಂಪೂರ್ಣ ಭದ್ರತಾ ಸೇವೆಯನ್ನು ಕಬ್ಬನ್ ಉದ್ಯಾನವನದಲ್ಲಿ ನಿರ್ವಹಿಸಬೇಕು. ಕಬ್ಬನ್ ಉದ್ಯಾನವನದ ಮರ, ಗಿಡ, ಸಸಿಗಳು, ಎಲ್ಲಾ ಕಟ್ಟಡಗಳು, ತೋಟದಲ್ಲಿ ಸಾಮಾನು ಸರಂಜಾಮುಗಳು, ಕುಂಡಗಳು ಹಾಗೂ ವಿದ್ಯುತ್ ದೀಪಗಳು, ಕೊಳವೆ ಬಾವಿಗಳು, ಮೋಟಾರ್ ಪಂಪುಗಳು, ವಾಹನಗಳು ಇತ್ಯಾದಿಗಳನ್ನು ಸರ್ವತೋಮುಖವಾಗಿ ಭದ್ರತೆ ನೀಡಿ ರಕ್ಷಿಸುವ ಕಾರ್ಯ ನಿರ್ವಹಿಸಬೇಕು.
2. ಕಬ್ಬನ್ ಉದ್ಯಾನವನದಲ್ಲಿನ ಮರ, ಗಿಡ, ಸಸಿಗಳಿಗೆ ಹಾನಿ ಮಾಡುವುದು. ಮರ ಹತ್ತುವುದು, ಮರದ ಕೊಂಬೆಗಳಿಗೆ ಜೋತು ಬೀಳುವುದು, ಮರದ ಮೇಲೆ ಹೆಸರು ಕೆತ್ತುವುದು, ಸಸಿ ಹೂವುಗಳನ್ನು ಮತ್ತು ಕಾಯಿ ಹಣ್ಣು ಕೀಳುವುದು, ಕೊಂಬೆಗಳಿಗೆ ಉಯ್ಯಾಲೆ ಕಟ್ಟುವುದು ಇತ್ಯಾದಿ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಗಿಡಗಳು, ಸಸಿಗಳು, ಬೀಜಗಳನ್ನು, ಹುಲ್ಲು ಇತ್ಯಾದಿಯನ್ನು ಸಂಗ್ರಹಿಸುವುದಾಗಲೀ ಅಥವಾ ಕಬ್ಬನ್ ಉದ್ಯಾನವನ ಹೊರಗೆ ಅಧಿಕೃತ ಅನುಮತಿ ಪತ್ರ ಇಲ್ಲದೆ ಸಾಗಿಸುವುದನ್ನು ನಿರ್ಬಂಧಿಸಬೇಕು.
3. ಕಬ್ಬನ್ ಉದ್ಯಾನವನದ ಒಳಗೆ ಅನಧಿಕೃತವಾಗಿ ಸಾರ್ವಜನಿಕರಿಗೆ ಬೀಜಗಳು, ಗಿಡಗಳು ಹಾಗೂ ತಿಂಡಿ ತಿನಿಸುಗಳು ಇತರೆ ಯಾವುದೇ ವಸ್ತುಗಳು/ಪದಾರ್ಥಗಳನ್ನು ಇಲಾಖಾ ನೌಕರರೇ ಆಗಲಿ ಅಥವಾ ಸಾರ್ವಜನಿಕರೇ ಆಗಲಿ ಮಾರಾಟ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.
4. ಕಬ್ಬನ್ ಉದ್ಯಾನವನದ ಒಳಗೆ ಸರ್ಕಾರಿ ವಾಹನಗಳು ಮತ್ತು ಸರ್ಕಾರಿ ಕೆಲಸದ ಮೇಲೆ ಬರುವ ಖಾಸಗಿ ವಾಹನಗಳನ್ನು ಹೊರತುಪಡಿಸಿ ಖಾಸಗಿ ವಾಹನಗಳು ಪ್ರವೇಶ ಮಾಡುವುದು, ಕಬ್ಬನ್ ಉದ್ಯಾನವನದ ಒಳಗೆ ಓಡಾಡುವುದು, ಎಲ್ಲೆಂದರಲ್ಲಿ ನಿಲುಗಡೆ ಮಾಡುವುದು, ದುರಸ್ಥಿಪಡಿಸುವುದು, ತೊಳೆಯುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
5. ಕಬ್ಬನ್ ಉದ್ಯಾನವನದಲ್ಲಿರುವ ಕೊಳವೆ ಬಾವಿಗಳು, ವಿದ್ಯುತ್ ಮೋಟಾರ್ ಪಂಪ್‌ಗಳು, ವಿದ್ಯುತ್ ಪ್ಯಾನಲ್ ಬೋರ್ಡ್‌ಗಳು (ಕ್ಯೂಬಿಕಲ್ ಔಟ್‌ಡೋರ್ ಬಾಕ್ಸ್) ಸಸ್ಯಾಗಾರಗಳಲ್ಲಿ ವಿದ್ಯುತ್ ಮೋಟಾರ್‌ಗಳು ಮತ್ತು ಕಾರಂಜಿಗಳಿಗೆ ಅಳವಡಿಸಿದ ಚಾನಲ್ಸ್ ವಿದ್ಯುತ್ ಮೋಟಾರ್‌ಗಳು, ವಿದ್ಯುತ್ ಬಣ್ಣದ ದೀಪಗಳಿಗೆ ಮತ್ತು ಕುಡಿಯುವ ನೀರಿಗಾಗಿ ಅಳವಡಿಸಿರುವ ವಾಟರ್ ಸ್ಟೋರೇಜ್ ಟ್ಯಾಂಕ್ (ಸಿಂಟೆಕ್ಸ್ ಟ್ಯಾಂಕ್‌ಗಳು) ಸಸ್ಯ ತೋಟದಲ್ಲಿ ಅಳವಡಿಸಿರುವ ವಾಲ್ವ್ ಗಳು, ನೀರಿನ ಕೊಳಾಯಿಗಳು ಇತ್ಯಾದಿಗಳಿಗೆ ಹಾನಿ ಆಗದಂತೆ ಮತ್ತು ಕಳವು ಆಗದಂತೆ ಸಂರಕ್ಷಿಸಬೇಕು.
6. ಉದ್ಯಾನವನದಲ್ಲಿ ಅಳವಡಿಸಿರುವ ತುಂತುರು ನೀರಾವರಿ / ಹನಿ ನೀರಾವರಿ ಪದ್ಧತಿಯಲ್ಲಿ ಅಳವಡಿಸಿರುವ ಉಪಕರಣಗಳಿಗೆ, ಕೊಳವೆ ಬಾವಿಗಳಿಗೆ ಹಾನಿ ಆಗದಂತೆ ಅಥವಾ ಕಳವು ಆಗದಂತೆ ಸಂರಕ್ಷಿಸಬೇಕು.
7. ಕಬ್ಬನ್ ಉದ್ಯಾನವನದ ಒಳಗಿನ ವಿದ್ಯುತ್ ದೀಪಗಳನ್ನು ಹಾಗೂ ದ್ವಾರಗಳಲ್ಲಿನ ಅಲಂಕಾರಿಕ ವಿದ್ಯುತ್ ದೀಪಗಳಿಗೆ ವಿದ್ಯುತ್ ಕೇಬಲ್ಸ್, ಕಂಟ್ರೋಲ್ ಸ್ವಿಚ್ ಬೋರ್ಡ್‌ಗಳಿಗೆ ಹಾನಿ ಆಗುವುದನ್ನು ಅಥವಾ ಕಳ್ಳತನ ಆಗುವುದನ್ನು ತಡೆಗಟ್ಟಬೇಕು.
8. ಕಬ್ಬನ್ ಉದ್ಯಾನವನದಲ್ಲಿ ಪಕ್ಷಿಗಳನ್ನು ಹಿಡಿಯುವುದು ಮತ್ತು ಫೌಂಟನ್‌ಗಳಲ್ಲಿ ಮಣ್ಣು, ಕಲ್ಲು, ಪ್ಲಾಸ್ಟಿಕ್ ಎಸೆಯುವುದು, ವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
9. ಕಬ್ಬನ್ ಉದ್ಯಾನವನದ ಒಳಗೆ ಒಣಗಿದ ಮರದ ಎಲೆ, ಹುಲ್ಲು, ಮರದ ರಂಬೆಗಳಿಗೆ ಕಾಗದ ಕಾಂಪೋಸ್ಟ, ಗುಂಡಿ ಇತ್ಯಾದಿ ಗಳಿಗೆ ಸಾರ್ವಜನಿಕರು / ದುಷ್ಕರ್ಮಿಗಳು ಬೆಂಕಿ ಹಚ್ಚದಂತೆ ಸಂಪೂರ್ಣವಾಗಿ ಎಚ್ಚರ ವಹಿಸಬೇಕು. ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಮಯದಲ್ಲಿ ತಕ್ಷಣ ಫೈರ್ ಸರ್ವೀಸ್ ಹಾಗೂ ಈ ಕಛೇರಿಗೂ ವರದಿ ಮಾಡಬೇಕು.
10. ಕಬ್ಬನ್ ಉದ್ಯಾನವನದ ಒಳಗೆ ಪ್ರವಾಸಿಗರು / ಸಾರ್ವಜನಿಕರು ಯಾವ ಸಮಯದಲ್ಲಿ ಆಗಲಿ ಮಲ-ಮೂತ್ರ ವಿಸರ್ಜನೆ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಸಾಕಿದ / ಬೀದಿ ನಾಯಿಗಳನ್ನು ತರುವುದನ್ನು /ಬರುವುದನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಅಳವಡಿಸಿರುವ ಮರದ ಸಿಮೆಂಟ್ /ಮೊಸಾಯಿಕ್ ಬೆಂಚುಗಳ ಮೇಲೆ ಮಲಗುವುದನ್ನು ಮತ್ತು ವ್ಯಾಯಾಮ ಮಾಡುವುದನ್ನು ನಿರ್ಬಂಧಿಸಬೇಕು.
11. ಕಬ್ಬನ್ ಉದ್ಯಾನವನದ ಒಳಗೆ ಅಧಿಕೃತ ಪರವಾನಗಿ ಇಲ್ಲದೆ ಚಲನ ಚಿತ್ರ / ಧಾರವಾಹಿ / ವೀಡಿಯೊ ಚಿತ್ರೀಕರಣ ಮಾಡುವುದನ್ನು ತಡೆಯಬೇಕು. ಕಬ್ಬನ್ ಉದ್ಯಾನವನದ ಒಳಗೆ ಶಾಸ್ತ್ರ ಹೇಳುವುದನ್ನು, ಅನಧಿಕೃತ ಮಾರ್ಗದರ್ಶಿಗಳನ್ನು (ಗೈಡ್ಸ್) ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ತೋಟಗಾರಿಕೆ ಚಟುವಟಿಕೆಗಳನ್ನು ಬಿಟ್ಟು ಯಾವುದೇ ಪ್ರಾರ್ಥನೆ ಮತೀಯ ಅಥವಾ ಸಭೆ ಸಮಾರಂಭ ಇನ್ನಿತರ ಚಟುವಟಿಕೆಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಬಿಕ್ಷುಕರು ಬಿಕ್ಷಾಟನೆ ಮಾಡುವುದನ್ನು, ಧೂಮಪಾನ, ಮಧ್ಯಪಾನ, ಮಾದಕ ವಸ್ತುಗಳ ಸೇವನೆ, ಜೂಜು, ಲೈಂಗಿಕ ಚಟುವಟಿಕೆಗಳು ಇತ್ಯಾದಿಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.
12. ಸಾರ್ವಜನಿಕರು ಹೊರಗಿನಿಂದ ಬ್ರೆಡ್ ಇತ್ಯಾದಿ ತಿನಿಸುಗಳನ್ನು ನಾಯಿಗಳಿಗೆ / ಕೋತಿಗಳಿಗೆ ಹಾಕುವುದು, ಕಾಗೆಗಳಿಗೆ, ಹಕ್ಕಿಗಳಿಗೆ ಕಾಳುಗಳನ್ನು ಹಾಕುವುದು ಮತ್ತು ಇರುವೆಗಳಿಗೆ ಸಕ್ಕರೆ ಹಾಕುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
13. ಕಬ್ಬನ್ ಉದ್ಯಾನವನ ವೀಕ್ಷಣೆಗೆ ಬರುವಂತಹ ಪ್ರವಾಸಿಗರಿಗೆ ಯಾವುದೇ ಸುಲಿಗೆ ದಬ್ಬಾಳಿಕೆಯಂತಹ ಚಟುವಟಿಕೆಗಳು ಕಂಡುಬಂದಲ್ಲಿ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡತಕ್ಕದ್ದು.

14. ಕಬ್ಬನ್ ಉದ್ಯಾನವನದ ಒಳಗೆ ಬರುವಂತಹ ಪ್ರವಾಸಿಗರು ತಿಂಡಿ ತಿನಿಸುಗಳನ್ನು ತಂದು ತಿಂದ ನಂತರ ತ್ಯಾಜ್ಯ ವಸ್ತುಗಳನ್ನು ಉದ್ಯಾನ ಗಳಲ್ಲಿ / ಹುಲ್ಲು ಹಾಸುಗಳ ಮೇಲೆ ಬಿಸಾಡದೆ ಕಸದ ತೊಟ್ಟಿಯಲ್ಲಿಯೇ ಹಾಕುವಂತೆ ಸೂಚಿಸುವುದು.

15. ಕಬ್ಬನ್ ಉದ್ಯಾನವನದ ಒಳಗೆ ರಾತ್ರಿ 8.00 ಗಂಟೆಯಿಂದ ಬೆಳಿಗ್ಗೆ 6.00 ಗಂಟೆಯವರೆಗೆ ಕರ್ತವ್ಯದಲ್ಲಿರುವ ಅಧಿಕಾರಿ / ನೌಕರರನ್ನು ಹೊರತುಪಡಿಸಿ ಸಾರ್ವಜನಿಕರನ್ನು ಹೊರಗೆ ಕಳುಹಿಸಬೇಕು. ಕಛೇರಿ ವೇಳೆ ಅಥವಾ ಕಛೇರಿ ವೇಳೆ ನಂತರದ ಸಮಯದಲ್ಲಿ ಅನಧಿಕೃತ ವ್ಯಕ್ತಿಗಳ ಚಲನವಲನಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಕಾಂಪೌಂಡ್ ದಾಟುವುದು ಅಥವಾ ಕಾಂಪೌಂಡ್ ಗೋಡೆಯಿಂದ ಗಿಡ, ಮರ, ಸೌದೆ ಇತ್ಯಾದಿಗಳನ್ನು ಸಾಗಿಸುವುದನ್ನು ನಿರ್ಬಂಧಿಸಬೇಕು.

16. ಕಬ್ಬನ್ ಉದ್ಯಾನವನದ ಒಳಗೆ ಆಕಸ್ಮಿಕವಾಗಿ ಯಾರಾದರೂ ಮರಣ ಹೊಂದಿದಾಗ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡಿ ಈ ಕಛೇರಿಗೆ ವರದಿ ಮಾಡಬೇಕು.

17. ಭದ್ರತೆಗಾಗಿ ನೇಮಿಸುವ ಭದ್ರತಾ ಸಿಬ್ಬಂದಿಯು ಕರ್ತವ್ಯದ ಮೇಲೆ ಇರುವಾಗ ಸಮವಸ್ತ್ರ, ಗುರುತಿನ ಬ್ಯಾಡ್ಜ್ ಧರಿಸಿರಬೇಕು. ಹಾಗೂ ಶಿಸ್ತು ಸಂಯಮದೊಂದಿಗೆ ಸಾರ್ವಜನಿಕರೊಡನೆ ಉತ್ತಮ ನಡೆ, ನುಡಿ ಇರುವಂತಹ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಸಿಬ್ಬಂದಿ ವರ್ಗದವರು ಕನ್ನಡ ಮತ್ತು ಆಂಗ್ಲ ಭಾಷೆಯನ್ನು ಚೆನ್ನಾಗಿ ಉಪಯೋಗಿಸುವ ಅರ್ಹತೆ ಇರಬೇಕು. ಯಾವುದೇ ಕಾರಣಕ್ಕೂ ಕರ್ತವ್ಯದ ಮೇಲೆ ಇರುವ ಸೆಕ್ಯೂರಿಟಿ ಸಿಬ್ಬಂದಿಯು ಧೂಮಪಾನ, ಮದ್ಯಪಾನ ಮಾಡಬಾರದು. ದಿನ 24 ಗಂಟೆಗಳ ಸಂರಕ್ಷಣೆಯನ್ನು 3 ಪಾಳೆಗಳಲ್ಲಿ ವ್ಯವಸ್ಥಿತವಾಗಿ ನಿರ್ಬಂಧಿಸಬೇಕು. 18 ವಯಸ್ಸಿನ ಕೆಳಗಿಂತಹ ಅಥಾವ ವಯಸ್ಸಾದವರನ್ನು ಭದ್ರತಾ ಕೆಲಸಕ್ಕೆ ನೇಮಿಸಬಾರದು.

18. ಸಾರ್ವಜನಿಕ ರಜೆಯ ದಿನಗಳಂದು ಮತ್ತು ಪ್ರತಿ ವರ್ಷ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಅವಧಿಯಲ್ಲಿ ಅಲಂಕಾರಿಕ ಕುಂಡಗಳನ್ನು ಕಬ್ಬನ್ ಉದ್ಯಾನವನದಲ್ಲಿರುವ ಪ್ರತಿಮೆಗಳ ಸುತ್ತ ಜೋಡಿಸುವುದರಿಂದ ಇವುಗಳಿಗೆ ವಿಶೇಷ ಭದ್ರತೆ ನಿರ್ವಹಣೆಯನ್ನು ಮಾಡಬೇಕು.

19. ಕಬ್ಬನ್ ಉದ್ಯಾನವನದಲ್ಲಿ ಕಾರ್ಯ ನಿರ್ವಹಿಸುವ ಸಿಬ್ಬಂದಿಯ ಮೇಲೆ ದುಷ್ಕರ್ಮಿಗಳು ಮಾಡುವ ಹಲ್ಲೆಯಂತಹ ಚಟುವಟಿಕೆಗಳನ್ನು ನಿರ್ಬಂಧಿಸಬೇಕು.

20. ಕಬ್ಬನ್ ಉದ್ಯಾನವನದಲ್ಲಿ ಯಾವುದೇ ಕ್ರೀಡೆ, ಆಟಗಳು, ಸಂಗೀತೋತ್ಸವ ಶಿಬಿರಗಳು ಇತ್ಯಾದಿಗಳನ್ನು ನಿರ್ಬಂಧಿಸಬೇಕು. ಗುಲಾಬಿವನ ಮತ್ತು ತಾವರೆಕೊಳದಲ್ಲಿನ ಹೂವುಗಳನ್ನು ಸಂರಕ್ಷಿಸಬೇಕು.

21. ಮೇಲೆ ನೀಡಿದ ಷರತ್ತುಗಳನ್ನು ಹೊರತುಪಡಿಸಿ ಕಾಲಕಾಲಕ್ಕೆ ನೀಡುವ ಸೂಚನೆಗಳನ್ನು ಪಾಲಿಸತಕ್ಕದ್ದು.

**ಷರತ್ತು ಹಾಗೂ ನಿಬಂಧನೆಗಳು**

1. ಟೆಂಡರ್‌ಗಳನ್ನು ಈ ಕಛೇರಿಯಿಂದ ಖರೀದಿಸಿದ ನಿಗದಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಟೆಂಡರ್ ಸಲ್ಲಿಸುವಾಗ ರೂ.50,000=00 ಗಳ ಭದ್ರತಾ ಠೇವಣಿಯನ್ನು (ಡಿ.ಡಿ) ಡಿಮ್ಯಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿಗೆ ಪಡೆದು ಸಲ್ಲಿಸಬೇಕು. ಹಾಗೂ ರೂ.50,000=00 ಗಳ ಮೌಲ್ಯದ ಸಾಲ್ವೆನ್ಸಿ ಪತ್ರವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸಬೇಕು. ಕಡಿಮೆ ದರವನ್ನು ನಮೂದಿಸಿರುವ ಯಶಸ್ವಿ ಟೆಂಡರ್‌ದಾರರ ಠೇವಣಿ ಹಣವನ್ನು ಬಿಟ್ಟು ಉಳಿದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್ ತೆರೆಯುವ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು. ಅಂಗೀಕೃತ ಟೆಂಡರ್‌ದಾರರ ಠೇವಣಿಯನ್ನು ಭದ್ರತಾ ಸೇವೆಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.

2. ಭದ್ರತಾ ಸೇವೆಯನ್ನು ನಿಗಧಿತ ಅವಧಿಯ ಮೊದಲೆ ಸ್ಥಗಿತಗೊಳಿಸಿದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಮತ್ತು ಭದ್ರತಾ ಸೇವೆಯಲ್ಲಿ ಯಾವುದೇ ನ್ಯೂನತೆಗಳು / ಲೋಪದೋಷಗಳು (ಅಂದರೆ ನಿರ್ವಹಿಸಬೇಕಾದ ಕಾರ್ಯಕ್ರಮಗಳಲ್ಲಿ ಕ್ರಮ ಸಂಖ್ಯೆ 1 ರಿಂದ 20 ರವರೆಗೆ) ಕೆಲಸದಲ್ಲಿ ಕಂಡುಬಂದಲ್ಲಿ ಪ್ರತಿ ತಿಂಗಳು ಪಾವತಿ ಮಾಡುವ ಟೆಂಡರ್ ಮೊತ್ತದಲ್ಲಿ ಶೇಕಡ 15 ಕಡಿತಗೊಳಿಸಲಾಗುವುದು. ಹಾಗೂ ವಾಹನ, ಗಣಕ ಯಂತ್ರಗಳು, ಬೆರಳಚ್ಚು ಯಂತ್ರಗಳು, ಟಿ.ವಿ.ಗಿಡಗಳು ಮೋಟಾರ್, ಪಂಪುಗಳು, ಪೀಠೋಪಕರಣಗಳು ಇತ್ಯಾದಿಗಳ ಕಳವಿನಿಂದ ಸಂಭವಿಸಬಹುದಾದ ನಷ್ಟವನ್ನು ನಿರ್ದೇಶಕರು ನಿಗದಿಪಡಿಸುವ ಮೌಲ್ಯವನ್ನು ಗುತ್ತಿಗೆ ಹಣದಿಂದ ಕಡಿತಗೊಳಿಸಲಾಗುವುದು.

3. ಕಡಿಮೆ ದರವನ್ನು ನಮೂದಿಸಿರುವ ಟೆಂಡರ್‌ನ್ನು ಅನುಮೋದಿಸಿದ ನಂತರ ಬದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಯಶಸ್ವಿ ಟೆಂಡರ್‌ದಾರರು ರೂ. 2.00 ಲಕ್ಷಕ್ಕೆ ರಾಷ್ಟ್ರೀಕೃತ ಬ್ಯಾಂಕ್ ಒಂದರಿಂದ ಪಡೆದ ಗ್ಯಾರಟಿ ಪತ್ರವನ್ನು ಪಡೆದು ಸಲ್ಲಿಸಬೇಕು. ಸರ್ಕಾರ / ಸರ್ಕಾರೇತರ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿರುವುದರ ಬಗ್ಗೆ ಕನಿಷ್ಠ 3 ವರ್ಷಗಳ ಅನುಭವ / ತೃಪ್ತಿಕರ ಪ್ರಮಾಣ ಪತ್ರ ಲಗತ್ತಿಸಿರಬೇಕು. ಕಬ್ಬನ್ ಉದ್ಯಾನವನದ ಕಛೇರಿಯಲ್ಲಿ ಪ್ರತಿ ದಿನ ಕಾರ್ಯ ನಿರ್ವಹಿಸುವ / ಪಾಳಿಯಲ್ಲಿ ಕಾರ್ಯನಿರ್ವಹಿಸುವ ವ್ಯಕ್ತಿಗಳ ಹೆಸರನ್ನು ಒಳಗೊಂಡ ಪುಸ್ತಕಗಳನ್ನು ಇಡಬೇಕು / ಪ್ರತಿ ಪಾಳಿಗಳಲ್ಲಿ ಸಹಿ ಮತ್ತು ವೇಳೆಯನ್ನು ನಮೂದಿಸಬೇಕು ಹಾಗೂ ಕಾರ್ಮಿಕ ಇಲಾಖೆಯಿಂದ ಅನುಮತಿ ಪತ್ರವನ್ನು ಆದಾಯ ಇಲಾಖೆಯಿಂದ ಪಡೆದ 2005-06 ನೇ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ಪತ್ರ ಪಡೆದು ಸಲ್ಲಿಸಬೇಕು. ಈ ದೃಢೀಕರಣ ಪತ್ರಗಳನ್ನು ಸಲ್ಲಿಸಲು ತಪ್ಪಿದಲ್ಲಿ ರೂ.50,000=00 ಠೇವಣಿಯನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಂಡು ಮರು ಟೆಂಡರ್ ಪ್ರಕ್ರಿಯೆ ನಡೆಸಲಾಗುವುದು.

4. ಭದ್ರತಾ ಸೇವೆಯನ್ನು ನಿಗದಿಗೊಳಿಸಿದ ಅವಧಿಯೊಳಗೆ ಮೊಟಕುಗೊಳಿಸುವ ಅಥವಾ ರದ್ದುಪಡಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ ಮತ್ತು ಟೆಂಡರ್‌ನ್ನು ಕಾರಣ ನೀಡದೆ ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.

5. ಯಶಸ್ವಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಟೆಂಡರ್ ಅನಮೋದಿಸಿ ದೃಢೀಕರಣ ಪತ್ರಗಳನ್ನು ಸಲ್ಲಿಸಲು ಸೂಚಿಸಿದ ನಂತರ ಈ ಪ್ರಕಟಣೆಯಲ್ಲಿ ನಮೂದಿಸಿರುವ ಷರತ್ತುಗಳು (1 ರಿಂದ 5) ಮತ್ತು ನಿರ್ವಹಿಸಬೇಕಾದ ಕೆಲಸಗಳಿಗೆ (1 ರಿಂದ 20) ಬದ್ಧನಾಗಿರುತ್ತೇನೆ. ಎಂದು ರೂ.200=00 ಛಾಪಾ ಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.

6. ಟೆಂಡರ್‌ದಾರರು ಕಾರ್ಮಿಕ ಇಲಾಖೆಯವರು ನಿಗಧಿಪಡಿಸಿದ ವೇತನವನ್ನು ಭದ್ರತಾ ಸಿಬ್ಬಂದಿಗೆ (ಮಿನಿಮಮ್ ವೇಜಸ್) ನೀಡತಕ್ಕದ್ದು

7. ಟೆಂಡರ್‌ದಾರರು ಟೆಂಡರ್ ಸಲ್ಲಿಸಲು ಕಾರ್ಮಿಕ ಭವಿಷ್ಯ ನಿಧಿ ಮತ್ತು ಇ.ಎಸ್.ಐ. ನೊಂದಣಿದಾರರಾಗಿರಬೇಕು. ಈ ಮೇಲ್ಕಂಡ ಇಲಾಖೆಯಲ್ಲಿ ಖಾತೆ ಸಂಖ್ಯೆಯನ್ನು ಹೊಂದಿರಬೇಕು.

ಹೆಚ್ಚಿನ ವಿಷಯಗಳಿಗೆ ಈ ಕೆಳ ಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

ಪಿ.ಆರ್.735

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋ.ಇ. ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಅಲ್ಪಾವಧಿ ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)

**ಸಂಖ್ಯೆ: ಕಾಪಾಅ: ಶಿವಿಶಿ: ಸ.ಇಂ.1: ಬಸ್ ನಿಲ್ದಾಣ-ಶಿರಾಳಕೊಪ್ಪ/:21:2006-07, ದಿನಾಂಕ:16ನೇ ನವಂಬರ್, 2006**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000ರ ಪ್ರಕಾರ ಆಕ್ಟ್ 2000ದ ನಿಯಮದಂತೆ ಪಿ.ಡಬ್ಲ್ಯೂ.ಜಿ.65 ಮತ್ತು 66ರ ನಿಯಮದನ್ವಯ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂವಾರು ಟೆಂಡರ್‌ಗಳನ್ನು ದ್ವಿ-ಲಕೋಟೆ ಪದ್ಧತಿಯನ್ವಯ, ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಟೆಂಡರ್‌ಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕದಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್., ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ರಾಷ್ಟ್ರೀಯ ಉಳಿತಾಯ ಪತ್ರಗಳಾಗಿದ್ದಲ್ಲಿ ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

**ಟೆಂಡರಿಗಿಟ್ಟ ಕಾಮಗಾರಿಗಳ ವಿವರ**

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಎಂಡಿ ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ.ಗಳಲ್ಲಿ) | ಅರ್ಹರಾದ ಗುತ್ತಿಗೆದಾರರು | ಟೆಂಡರ್ ಕಾಮಗಾರಿಗಳನ್ನು ಪರಿಪೂರ್ಣವಾಗಿ ಮುಗಿಸಲು ನಿಗದಿಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿನಾಂಕ ಸಂಜೆ 5.30ರ ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ: ಸಂಜೆ 5.30 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ: ಸಂಜೆ 4.30 ಗಂಟೆ ವರೆಗೆ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1. | ಶಿರಾಳಕೊಪ್ಪ ಪಟ್ಟಣದಲ್ಲಿ ನೂತನ ಪುರಸಭೆ ಬಸ್ ನಿಲ್ದಾಣ ಕಾಮಗಾರಿ. | 60.00 | 60,000/- | 5,500/- | 1ನೇ ದರ್ಜೆ | 12 ತಿಂಗಳು ಮಳೆಗಾಲ ಸೇರಿ | 30.11.2006 | 06.12.2006 ರಿಂದ 08.12.2006 | 11.12.2006 |

**ನಿಬಂಧನೆಗಳು**

1. ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಯನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ.ಪಿ.ಡಬ್ಲ್ಯೂ.ಡಿ. 344 ಸಿ.ಆರ್.ಎಂ. 2000 ದಿನಾಂಕ:15.01.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡಾ 30ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
2. ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.
3. ಕಾಮಗಾರಿಗಳಿಗೆ ಟೆಂಡರ್ ಹಾಕಬಯಸುವ ಗುತ್ತಿಗೆದಾರರು 2 ಯಾಂತ್ರೀಕೃತ ಕಾಂಕ್ರೀಟ್ ಮಿಕ್ಸರ್, ಪಿನ್ ಮತ್ತು ವೈಬ್ರೇಟರ್‌ಗಳು, ಸೆಂಟರಿಂಗ್ ಮೈಟೀರಿಯಲ್ಸ್, 2 ಟಿಪ್ಪರ್ ಮತ್ತು ಕಾಮಗಾರಿಗಳಿಗೆ ಅವಶ್ಯವಿರುವ ಎಲ್ಲಾ ಇತರೆ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ದಾಖಲೆ ಒದಗಿಸತಕ್ಕದ್ದು.
4. ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
5. ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು ಹಾಗೂ ನೋಂದಣಿ ಪುಸ್ತಕ (Pass Book) ದಲ್ಲಿ ಕಡ್ಡಾಯವಾಗಿ ಟೆಂಡರ್ ವಿವರಗಳನ್ನು ದಾಖಲಿಸಿಕೊಳ್ಳುವುದು.
6. ಗುತ್ತಿಗೆದಾರರು ಒಂದು ವರ್ಷದವರೆಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
7. ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಶೇ.30 ರಷ್ಟು ಕಾಮಗಾರಿಯ ಮೊತ್ತಕ್ಕೆ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು. (Line of Credit at 30% of amount put to Tender)

8. ಸದರಿ ಕಾಮಗಾರಿಗಳು 2 ಲಕೋಟೆಗಳನ್ನು ಹೊಂದಿದ್ದು ಲಕೋಟೆ-ಎ: ಟೆಕ್ನಿಕಲ್ ಬಿಡ್, ಲಕೋಟೆ-ಬಿ, ಫೈನಾನ್ಷಿಯಲ್ ಬಿಡ್‌ಗಳನ್ನು ಹೊಂದಿರುತ್ತದೆ. ಟೆಂಡರ್‌ದಾರರು ಟೆಂಡರ್‌ಗಳನ್ನು 2 ಪ್ರತ್ಯೇಕ ಲಕೋಟೆಗಳಲ್ಲಿ, ಮೊಹರಾದ ಲಕೋಟೆಯ ಮೇಲೆ ಲಕೋಟೆ-ಎ: ಟೆಕ್ನಿಕಲ್ ಬಿಡ್, ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್ ಎಂದು ನಮೂದಿಸಿ ಮತ್ತೊಂದು ಲಕೋಟೆಯಲ್ಲಿ ಹಾಕಿ ಟೆಕ್ನಿಕಲ್ ಬಿಡ್, ಫೈನಾನ್ಷಿಯಲ್ ಬಿಡ್ ಎಂದು ನಮೂದಿಸಿ ಟೆಂಡರ್ ಸಲ್ಲಿಸತಕ್ಕದ್ದು.

9. ಲಕೋಟೆ-ಎ: ಟೆಕ್ನಿಕಲ್ ಬಿಡ್ ಅನ್ನು ದ್ವಿಪ್ರತಿಗಳಲ್ಲಿ ಗುತ್ತಿಗೆದಾರರ ಬಳಿ ಇರುವ ತಾಂತ್ರಿಕ ಮಾಹಿತಿಗಳನ್ನು ಹೊಂದಿದ್ದು ಅವುಗಳಿಗೆ ವಿವರಗಳನ್ನು ನಿಬಂಧನೆ ಕ್ರಮಸಂಖ್ಯೆ 2ರಂತೆ ನಿಗದಿತ ರೀತಿಯಲ್ಲಿ ಸಲ್ಲಿಸಬೇಕು. ಹಾಗೂ ಕಾಮಗಾರಿಗೆ ಅವಶ್ಯಕವಾದ ಮೊತ್ತದ ಇ.ಎಂ.ಡಿ.ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್., ಬ್ಯಾಂಕ್ ಗ್ಯಾರಂಟಿ (ಕನಿಷ್ಠ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ರಾಷ್ಟ್ರೀಯ ಉಳಿತಾಯ ಪತ್ರಗಳಾಗಿದ್ದಲ್ಲಿ ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

10. ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್: - ಟೆಂಡರ್ ಶೆಡ್ಯೂಲನ್ನು ದ್ವಿ ಪ್ರತಿಯಲ್ಲಿ ಹೊಂದಿದ್ದು, ಪ್ರತಿ ಐಟಂಗಳಿಗೆ ದರವನ್ನು ಅಂಕೆಯಲ್ಲಿ ಮತ್ತು ಅಕ್ಷರಗಳಲ್ಲಿ ಸಲ್ಲಿಸಬೇಕು. ಲಕೋಟೆ-ಎ ಟೆಕ್ನಿಕಲ್ ಬಿಡ್‌ಅನ್ನು ಮೊದಲು ತೆರೆಯಲಾಗುವುದು ಹಾಗೂ ಗುತ್ತಿಗೆದಾರರು ಇದರಲ್ಲಿ ಒದಗಿಸಿರುವ ವಿವರಗಳನ್ನು ಪರಿಶೀಲಿಸಲಾಗುವುದು. ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ: ಮುಅ/ ಸಂಕದ/ ಆಶಾ/ 06-07/ ದಿನಾಂಕ:08.11.2006ರ ಆದೇಶದಂತೆ ತಾಂತ್ರಿಕ ಬಿಡ್ಡನ್ನು ಕಾರ್ಯಪಾಲಕ ಅಭಿಯಂತರವರು ತೆರೆದು ತುಲನೆ ಮಾಡಿ ಅಧೀಕ್ಷಕ ಅಭಿಯಂತರವರ ಪರಿಶೀಲನೆ ಹಾಗೂ ತೀರ್ಮಾನಕ್ಕಾಗಿ ಸಲ್ಲಿಸಲಾಗುವುದು. ಅನುಮೋದನೆಯಾದ ನಂತರ ಲಕೋಟೆ-ಬಿ ಫೈನಾನ್ಷಿಯಲ್ ಬಿಡ್‌ನ್ನು ತೆರೆಯಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

11. ಗುತ್ತಿಗೆ ಪೆಟ್ಟಿಗೆಗಳನ್ನು ಕೇಂದ್ರ ಕಛೇರಿ ಬೆಂಗಳೂರು, ವೃತ್ತ ಕಛೇರಿ ಶಿವಮೊಗ್ಗ ಮತ್ತು ವಿಭಾಗ ಕಛೇರಿ ಶಿವಮೊಗ್ಗಗಳಲ್ಲಿ ಇಡಲಾಗುವುದು.

12. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ತೆಗೆದುಕೊಂಡು ಹೋಗುವಾಗ ತಮ್ಮ ರಿಜಿಸ್ಟ್ರೇಷನ್ ಪಾಸ್ ಬುಕ್ಕನ್ನು ಒದಗಿಸಿ ಕೆಲಸದ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಸಾರ್ವಜನಿಕ ರಜಾವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

**ಬಿ.ಟಿ. ಕಾಂತರಾಜ್**

ಪಿ.ಆರ್.736

ಕಾರ್ಯಪಾಲಕ ಅಭಿಯಂತರರು,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಉಪಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಹರಾಜು ಪ್ರಕಟಣೆ

### ಸಂಖ್ಯೆ: ಬಿ3-ಶಾಲಾ-ನೆಡುತೋಪು-ಹರಾಜು-ಸಿಆರ್-30/ 2006-07, ದಿನಾಂಕ:17ನೇ ನವಂಬರ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಶಿವಮೊಗ್ಗ ಅರಣ್ಯ ವಿಭಾಗದ ಈ ಕೆಳಕಂಡ ಸ್ಥಳದಲ್ಲಿನ ಶಾಲಾವತಿಯಿಂದ ಬೆಳೆಸಲಾದ 1992-93ನೇ ಸಾಲಿನ ಅಕೇಶಿಯಾ ನೆಡುತೋಪಿನಲ್ಲಿ ಅಕೇಶಿಯಾ ಮರಗಳನ್ನು ಶಿವಮೊಗ್ಗ ಅರಣ್ಯ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯವರು ಈ ಕೆಳಕಂಡ ದಿನಾಂಕದಿಂದ ಹರಾಜು ಮಾಡುವರು.

| ಕ್ರ. ಸಂ. | ಶಾಲಾವತಿಯಿಂದ ಬೆಳೆಸಲಾದ ನೆಡುತೋಪು ಹರಾಜಿನ ಮರ | ಹರಾಜಿನ ದಿನಾಂಕ ಸಮಯ ಮತ್ತು ಹರಾಜು ನಡೆಯುವ ಸ್ಥಳ | ಶಾಲಾ ನೆಡುತೋಪಿನಲ್ಲಿರುವ ಅಕೇಶಿಯಾ ಮರಗಳ ಸಂಖ್ಯೆ |
|---|---|---|---|
| 1. | 1992-93ನೇ ಸಾಲಿನಲ್ಲಿ ಸಿರಿಗೆರೆ ಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲಾವರಣದಲ್ಲಿ 2.75 ಹೆಕ್ಟೆರ್ ಪ್ರದೇಶದಲ್ಲಿ ಬೆಳೆಸಲಾದ ಅಕೇಶಿಯಾ ನೆಡುತೋಪಿನಲ್ಲಿ ಅಕೇಶಿಯಾ ಮರಗಳು. | 18.12.2006ರಂದು ಬೆಳಿಗ್ಗೆ 11.00 ಗಂಟೆಗೆ, ಸಿರಿಗೆರೆ ಪ್ರಾಥಮಿಕ ಶಾಲೆಯ ಆವರಣದ ಶಾಲಾ ಅಕೇಶಿಯಾ ನೆಡುತೋಪಿನ ಹತ್ತಿರ, ಸಿರಿಗೆರೆ. | 645 ಅಕೇಶಿಯಾ ನಿಂತ ಮರಗಳು |

**ಹರಾಜಿನ ಷರತ್ತುಗಳು:**

1. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು 5000/- ರೂ.ಗಳ ಮುಂಗಡ ಠೇವಣಿ ಹಣವನ್ನು ಹರಾಜಿನಲ್ಲಿ ಭಾಗವಹಿಸುವ ಮೊದಲೇ ವಲಯ ಅರಣ್ಯಾಧಿಕಾರಿಗಳು, ಆಯನೂರು ವಲಯ ಇವರಲ್ಲಿ ಕಟ್ಟತಕ್ಕದ್ದು.
2. ಹರಾಜಿನ ದಿನ ಖರೀದಿಸಿದ ಒಟ್ಟು ಮೌಲ್ಯದ ಪೂರ್ಣ ಬೆಲೆ ಮತ್ತು ಪ್ರಚಲಿತ ಪೂರ್ತಿ ತೆರಿಗೆಯನ್ನು ಪಾವತಿ ಮಾಡಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು.
3. ಹರಾಜಿನ ಮರಗಳನ್ನು ಖರೀದಿಸಿದ ಖರೀದಿದಾರರು ಮರಗಳನ್ನು ನೆಲಮಟ್ಟಕ್ಕೆ ತೆಗೆದು ಸಾಗಿಸತಕ್ಕದ್ದು.
4. ಅಕೇಶಿಯಾ ನೆಡುತೋಪಿನಲ್ಲಿನ ಮರಗಳನ್ನು ತೆಗೆಯುವಾಗ ಯಾವುದೇ ಜೀವಹಾನಿ ಸಾರ್ವಜನಿಕ ಸರ್ಕಾರಿ ಆಸ್ತಿ ಪಾಸ್ತಿ ಹಾನಿಯಾಗದಂತೆ ಎಚ್ಚರಿಕೆ ವಹಿಸಿ ಕಾರ್ಯ ನಿರ್ವಹಿಸುವುದು. ಹಾಗೇನಾದರೂ ಯಾವುದೇ ಮೇಲ್ಕಂಡ ಘಟನೆಗಳು ನಡೆದಲ್ಲಿ ಅವುಗಳಿಗೆ ಖರೀದಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
5. ನೆಡುತೋಪಿನಲ್ಲಿನ ಮರಗಳನ್ನು ತೆಗೆಯುವ ಮುನ್ನ ವಿದ್ಯುತ್ ಲೈನ್ ದೂರವಾಣಿ ಲೈನ್‌ಗಳನ್ನು ಮುಂಚಿತವಾಗಿ ಸಂಬಂಧಪಟ್ಟ ಇಲಾಖೆಯವರಿಂದ ತೆಗೆಸಿ ನಂತರ ಮರಗಳ ಕಡಿತಲೆ ಮಾಡುವುದು.
6. ಹೆಚ್ಚಿನ ಮಾಹಿತಿಗಳು ಬೇಕಿದ್ದಲ್ಲಿ ಈ ಕೆಳಕಂಡ ಕಛೇರಿಯಲ್ಲಾಗಲೀ ಅಥವಾ ಆಯನೂರು ವಲಯದ ವಲಯ ಅರಣ್ಯಾಧಿಕಾರಿಗಳಲ್ಲಾಗಲೀ ಪಡೆಯಲು ತಿಳಿಸಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್.737

**ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,**
**7ನೇ ಮಹಡಿ, ಬಹುಮಹಡಿಗಳ ಕಟ್ಟಡ, ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು-560 001**

**ಅಧಿಸೂಚನೆ**

**ಸಂಖ್ಯೆ: ಆಸಾನಿ. 129/ ಆಡಳಿತ(2)/ 2006, ದಿನಾಂಕ:14ನೇ ನವಂಬರ್, 2006**

**ವಿಷಯ:** ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡದ 'ಬ್ಯಾಕ್ ಲಾಗ್' ಹುದ್ದೆಗಳಿಗೆ ಅರ್ಜಿ ಆಹ್ವಾನ, ಕರ್ನಾಟಕ ರಾಜ್ಯಪತ್ರ ಗುರುವಾರ ಜನವರಿ 17, 2002ರ ಭಾಗ-5ರಲ್ಲಿ ಪ್ರಕಟವಾಗಿರುವ ಅಧಿಸೂಚನೆಗೆ ಪರಿಷ್ಕರಣೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್: 13: ಎಸ್‌ಟಿಸಿ 2001, ಬೆಂಗಳೂರು, ದಿನಾಂಕ:21.11.2001.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06/ ಸಸನಿ 2001, ದಿನಾಂಕ:13.02.2001.
3) ಅಧಿಸೂಚನೆ ಸಂಖ್ಯೆ: ಆಸಾನಿ.58: ಆಡಳಿತ (2): 2001, ದಿನಾಂಕ:08.03.2002.

ದಿನಾಂಕ:17.01.2002ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುವ ನೇಮಕಾತಿ ಜಾಹೀರಾತಿನ ಪರಿಷ್ಕರಿಸಿದ ಅಧಿಸೂಚನೆಯನ್ನು ದಿನಾಂಕ:08.03.2002ರಲ್ಲಿ ಹೊರಡಿಸಲಾಗಿತ್ತು. ಸದರೀ ಅಧಿಸೂಚನೆಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಹಾಜರಾಗದ ಪ್ರಯುಕ್ತ ಖಾಲಿ ಉಳಿದಿರುವ ಹುದ್ದೆಗಳ ವಿವರ ಕೆಳಕಂಡಂತಿದೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಮೀಸಲಾತಿ ಪ್ರವರ್ಗ | ಒಟ್ಟು ಹುದ್ದೆಗಳು | ಒಟ್ಟು ಹುದ್ದೆಗಳಲ್ಲಿ ಅಡ್ಡ ಮೀಸಲಾತಿ | | ಅಡ್ಡ ಮೀಸಲಾತಿ ಇಲ್ಲದ್ದು |
|---|---|---|---|---|---|---|
| | | | | ಮಹಿಳೆಯರು | ಗ್ರಾಮೀಣ ಅಭ್ಯರ್ಥಿ | |
| 1 | 2 | 3 | 4 | 5 | 6 | 7 |
| 1. | ಗಣತಿದಾರರು ಕಂ ಡಾಟಾ ಎಂಟ್ರಿ ಆಪರೇಟರ್ಸ್ (ರೂ.3000-5450) | ಪ.ಜಾ. | 5 | 1 | - | 4 |
| 2. | ದ್ವಿ.ದ.ಸ. (ರೂ.3000-5450) | ಪ.ಜಾ. | 2 | 1 | - | 1 |
| | | ಪ.ಪಂ. | 1 | - | - | 1 |
| 3. | ಬೆರಳಚ್ಚುಗಾರರು (ರೂ.3000-5450) + ವಿ.ವೇ.90/- | ಪ.ಜಾ. | 2 | - | 1 | 1 |

ಸದರಿ ಖಾಲಿ ಹುದ್ದೆಗಳನ್ನು ತುಂಬಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

**ವಿದ್ಯಾರ್ಹತೆ:**

1. ಗಣತಿದಾರರು/ ಡಾಟಾ ಎಂಟ್ರಿ ಆಪರೇಟರ್ ಮತ್ತು ದ್ವಿ.ದ.ಸ.: ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಗಣಕಯಂತ್ರದಲ್ಲಿ ಎಂ.ಎಸ್. ಆಫೀಸ್ ಉಪಯೋಗ ತಿಳಿದಿರುವವರಿಗೆ ಆದ್ಯತೆ ನೀಡಲಾಗುವುದು.
2. **ಬೆರಳಚ್ಚುಗಾರರು:** ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಮತ್ತು ಕನ್ನಡ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು. ಗಣಕಯಂತ್ರದಲ್ಲಿ ಎಂ.ಎಸ್. ಆಫೀಸ್ ಉಪಯೋಗ ತಿಳಿದಿರುವವರಿಗೆ ಆದ್ಯತೆ ನೀಡಲಾಗುವುದು.

**ವಯೋಮಿತಿ:**

ಅರ್ಜಿ ಸಲ್ಲಿಸಲು ಕಡೆಯ ದಿನಾಂಕ:15.12.2006 ರಂದು 29 ವರ್ಷಗಳು ತುಂಬಿರಬೇಕು ಮತ್ತು ಗರಿಷ್ಟ ವಯೋಮಿತಿ 40 ವರ್ಷಗಳನ್ನು ಮೀರಿರಬಾರದು. ಮಾಜಿ ಸೈನಿಕರಿಗೆ ಅವರು ಸಲ್ಲಿಸಿರುವ ಸೈನಿಕ ಸೇವೆಯೂ ಸೇರಿದಂತೆ ಗರಿಷ್ಠ ವಯೋಮಿತಿ 43 ವರ್ಷಗಳು ಮೀರಿರಬಾರದು.

**ಕಡೆಯ ದಿನಾಂಕ:**

ಅರ್ಜಿಗಳನ್ನು ದಿನಾಂಕ:15.12.2006ರಂದು ಈ ಕಛೇರಿಗೆ ಸಂಜೆ 5.00 ಗಂಟೆಯೊಳಗಾಗಿ ತಲುಪುವಂತೆ ಕಳುಹಿಸಿಕೊಡಬೇಕು. ನಂತರ ಸ್ವೀಕೃತವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ನಿಬಂಧನೆಗಳು:**

1. ನೇಮಕಾತಿಯನ್ನು ನಿಗದಿಪಡಿಸಿರುವ ವಿದ್ಯಾರ್ಹತಾ ಪರೀಕ್ಷೆಯಲ್ಲಿ ಪಡೆದಿರುವ ಅಂಕಗಳ ಆಧಾರದ ಮೇರೆಗೆ ಮಾಡುವುದರಿಂದ ಅಂಕ ಪಟ್ಟಿಗಳ ಛಾಯಾ ಪ್ರತಿಗಳನ್ನು ಸರ್ಕಾರದ ಪತ್ರಾಂಕಿತ ಅಧಿಕಾರಿಗಳ ದೃಢೀಕರಣದೊಂದಿಗೆ ಸಲ್ಲಿಸಬೇಕು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಂಕ ಪಟ್ಟಿ ಅಥವಾ ಶಾಲಾ ವರ್ಗಾವಣೆ ಪ್ರಮಾಣ ಪತ್ರದ (ಟಿ.ಸಿ.) ದೃಢೀಕೃತ ಛಾಯಾ ಪ್ರತಿಯನ್ನು ಲಗತ್ತಿಸಬೇಕು.
3. ಜಾತಿ ಪ್ರಮಾಣ ಪತ್ರವನ್ನು ಸರ್ಕಾರದ ಆದೇಶದ ಸಂಖ್ಯೆ: ಸಕಇ:132: ಎಸ್‌ಎಡಿ.97(1), ದಿನಾಂಕ:08.02.2000ರಲ್ಲಿ ನಿಗದಿಪಡಿಸಿರುವ ನಮೂನೆ 'ಡಿ' ಯಲ್ಲಿ ತಹಸೀಲ್ದಾರ ರಿಂದ ಪ್ರಮಾಣ ಪತ್ರವನ್ನು ಪಡೆದು ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು.
4. ಮಾಜಿ ಸೈನಿಕ ಅರ್ಜಿದಾರರು ಸೈನಿಕ ಸೇವೆಯಿಂದ ಬಿಡುಗಡೆಯಾದ ಅಥವಾ ಮುಕ್ತಿ ಹೊಂದಿದ ಪ್ರಪತ್ರದ ಪ್ರತಿಯನ್ನು ಲಗತ್ತಿಸಬೇಕು.
5. ಗ್ರಾಮೀಣ ಮೀಸಲಾತಿ ಸೌಲಭ್ಯವನ್ನು ಪಡೆಯಲಿಚ್ಛಿಸುವ ಅಭ್ಯರ್ಥಿಗಳು ಸರ್ಕಾರವು ದಿನಾಂಕ:13.02.2001ರ ಆದೇಶ ಸಂಖ್ಯೆ: ಸಿಆಸುಇ 8 ಸೆಸೆನಿ 2001ರಲ್ಲಿ ನಿಗದಿಪಡಿಸಿರುವ ನಮೂನೆ 2ರಲ್ಲಿ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಕ್ಷೇತ್ರ ಶಿಕ್ಷಣ ಅಧಿಕಾರಿಗಳ ಮೇಲು ಸಹಿಯನ್ನು ಪಡೆದ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ನಕಲುಗಳನ್ನು ಸಲ್ಲಿಸಬೇಕು.
6. ಈ ಅಧಿಸೂಚನೆಗೆ ಅನುಗುಣವಾಗಿ ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿದ್ದೇವೆಂದು ಘೋಷಣಾ ಪತ್ರವನ್ನು ಅರ್ಜಿಯ ಜೊತೆಯಲ್ಲಿ ಸಲ್ಲಿಸಬೇಕು.

**ಹೆಚ್ಚುವರಿ ಮಾಹಿತಿ:**

ಅರ್ಜಿಗಳನ್ನು ಕರ್ನಾಟಕ ಲೋಕಸೇವಾ ಆಯೋಗವು ನಿಗದಿಪಡಿಸಿರುವ ಅರ್ಜಿ ನಮೂನೆ-1ರಲ್ಲಿ ದ್ವಿಪ್ರತಿಗಳಲ್ಲಿ ಸಲ್ಲಿಸತಕ್ಕದ್ದು, ಸದರೀ ಅರ್ಜಿಯು ಸರ್ಕಾರಿ ಮುದ್ರಣಾಲಯದಲ್ಲಿ ಮತ್ತು ಸರ್ಕಾರದಿಂದ ಅಂಗೀಕೃತ ಬುಕ್ ಡಿಪೋಗಳಲ್ಲಿ ದೊರೆಯುತ್ತದೆ.

**ಬಿ.ಎನ್. ಅರಸರಾಜು**
ನಿರ್ದೇಶಕರು ಮತ್ತು ನೇಮಕಾತಿ ಪ್ರಾಧಿಕಾರ,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

ಪಿ.ಆರ್.738

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅಧಿಸೂಚನೆ

## ಸಂಖ್ಯೆ: ಆಕುಕ 309 ಪಿಐಎಂ 2005, ದಿನಾಂಕ:23ನೇ ಆಗಸ್ಟ್, 2006

ಕರ್ನಾಟಕ ಲೋಕ ಸೇವಾ ಆಯೋಗವು ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 43 ಆಟಿಬಿ 2005 ದಿನಾಂಕ:02.06.2006ರಲ್ಲಿ, ಭಾರತೀಯ ವೈದ್ಯ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ ಯುನಾನಿ ವೈದ್ಯರು ದರ್ಜೆ-2ರ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೇ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳ 2001ರಡಿಯಲ್ಲಿ ಆಯ್ಕೆ ಮಾಡಿ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದರಿಂದ ಈ ಕೆಳಕಂಡ ಅಭ್ಯರ್ಥಿಗಳನ್ನು ಭಾರತೀಯ ವೈದ್ಯ ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವೈದ್ಯರು ದರ್ಜೆ-2 (ಯುನಾನಿ) (ಗ್ರೂಪ್-ಬಿ) ಬ್ಯಾಕ್‌ಲಾಗ್ ಹುದ್ದೆಗಳಿಗೆ ರೂ.6000-150-7200-200-8800-260-10880-320-11200ರ ವೇತನ ಶ್ರೇಣಿಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಿ ಅವರ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ಮುಂದಿನ ಆದೇಶದವರೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ಮೀಸಲಾತಿ | ನೇಮಕಾತಿ ಮಾಡಿರುವ ಹುದ್ದೆ ಮತ್ತು ಸ್ಥಳ |
|---|---|---|---|---|
| 1. | ಡಾ: ರಮೇಶ್ ಹೆಚ್.ಎಂ. ನಂ.35, ಶ್ರೀ ಕೃಷ್ಣ ಕೃಪ, 3ನೇ ಕ್ರಾಸ್, ಹನುಮಂತಪ್ಪ ಬಡಾವಣೆ, ಸುಲ್ತಾನ್ ಪಾಳ್ಯ, ಆರ್.ಟಿ. ನಗರ ಅಂಚೆ, ಬೆಂಗಳೂರು-5600032. | 21.12.1973 | ಪ.ಜಾ. | ಸರ್ಕಾರಿ ಯುನಾನಿ ಚಿಕಿತ್ಸಾಲಯ, ಟಿ.ನರಸೀಪುರ, ಮೈಸೂರು ಜಿಲ್ಲೆ. |
| 2. | ಡಾ: ನರಸಿಂಹಮೂರ್ತಿ ಎಂ.ಎಲ್. ನಂ.5, 1ನೇ ಮುಖ್ಯ ರಸ್ತೆ, 2ನೇ ಕ್ರಾಸ್, ಹರಿಜನ ಕಾಲೋನಿ, ಹಳೆ ಗಂಗಾನಗರ, ಆರ್.ಟಿ. ನಗರ, ಬೆಂಗಳೂರು. | 14.04.1975 | ಪ.ಜಾ. | ಸರ್ಕಾರಿ ಯುನಾನಿ ಚಿಕಿತ್ಸಾಲಯ, ಕೋಳಿಪಾಳ್ಯ, ಚಾಮರಾಜನಗರ ಜಿಲ್ಲೆ. |
| 3. | ಡಾ: ನಾಗೇಶ್ ಸಿ.ಎಸ್. ನಂ.ಡಬ್ಲ್ಯೂ-51, ಹೆಚ್.ಎಂ.ಟಿ. ಕ್ವಾಟ್ರಸ್ ಮತ್ತು ಅಂಚೆ, ಜಾಲಹಳ್ಳಿ, ಬೆಂಗಳೂರು. | 18.08.1981 | ಪ.ಜಾ. | ಸರ್ಕಾರಿ ಯುನಾನಿ ಚಿಕಿತ್ಸಾಲಯ, ನಾಗವಲ್ಲಿ, ಚಾಮರಾಜನಗರ ಜಿಲ್ಲೆ. |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿದೆ.

1. ಸದರಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿ 1977ರ ನಿಯಮ 5 ಮತ್ತು 6 ರನ್ವಯ 2 ವರ್ಷಗಳ ಖಾಯಂ ಪೂರ್ವ ಪರಿವೀಕ್ಷಣಾ ಸೇವಾ ಅವಧಿಗೆ ಒಳಪಟ್ಟಿರುತ್ತದೆ.
2. ಸದರಿ ಅಭ್ಯರ್ಥಿಗಳ ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಗಳು/ ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3. ಸದರಿ ನೇಮಕಾತಿಯು ತಾತ್ಕಾಲಿಕವಾಗಿದ್ದು, ತಕ್ಷಣದಿಂದ ಜಾರಿಗೆ ಬರುತ್ತದೆ.
4. ಈ ನೇಮಕಾತಿಯು ಆದೇಶ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಗಳು ನೇಮಕ ಮಾಡಿದ ಹುದ್ದೆಗೆ ಹಾಜರಾಗತಕ್ಕದ್ದು. ನಿಗದಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದ ಪಕ್ಷದಲ್ಲಿ ಸದರಿ ಅಭ್ಯರ್ಥಿಗಳು ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ ನಿಯಮ 5(2) ರಲ್ಲಿರುವಂತೆ ಆಯ್ಕೆ ಪಟ್ಟಿಯಲ್ಲಿನ ಜೇಷ್ಠತೆಯನ್ನು ಕಳೆದುಕೊಳ್ಳುವರು ತದನಂತರ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು.
5. ಸದರಿ ಅಭ್ಯರ್ಥಿಗಳು ಸರ್ಕಾರವು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಮತ್ತು ಕೆ.ಸಿ.ಎಸ್. (ಕನ್ನಡ ಭಾಷಾ ಪರೀಕ್ಷೆ) 1974ರನ್ವಯ ಖಾಯಂ ಪೂರ್ವ ಅವಧಿಯಾದ 2 ವರ್ಷದೊಳಗಾಗಿ ತೇರ್ಗಡೆ ಹೊಂದತಕ್ಕದ್ದು.
6. ಸದರಿ ಅಭ್ಯರ್ಥಿಗಳು ನೇಮಕ ಮಾಡಲ್ಪಟ್ಟ ಕೇಂದ್ರ ಸ್ಥಳದಲ್ಲಿಯೇ ವಾಸಿಸತಕ್ಕದ್ದು, ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಮಾಡಿದ ಸ್ಥಳಕ್ಕೆ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
7. ಸದರಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಮೊದಲು ಸಂಬಂಧಪಟ್ಟ ವಿಭಾಗೀಯ ಉಪನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ ಇವರಿಗೆ ಮೂಲ ದಾಖಲಾತಿಗಳನ್ನು ಅಂದರೆ ವೈದ್ಯರು ದರ್ಜೆ-2ರ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆ, ಅಂಕಪಟ್ಟಿ, ಜನ್ಮ ದಿನಾಂಕದ ದಾಖಲೆ, ಜಾತಿ ಪ್ರಮಾಣ ಪತ್ರ ಇತ್ಯಾದಿಗಳನ್ನು ಸಲ್ಲಿಸತಕ್ಕದ್ದು.
8. ಅಭ್ಯರ್ಥಿಗಳು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
9. ಸದರಿ ಅಭ್ಯರ್ಥಿಗಳ ವಿದ್ಯಾರ್ಹತೆ ಜನ್ಮ ದಿನಾಂಕ ಇತ್ಯಾದಿ ಪ್ರಮಾಣ ಪತ್ರಗಳಲ್ಲಿ ತಪ್ಪು ಮಾಹಿತಿ ಒದಗಿಸಿರುವುದು ಕಂಡುಬಂದಲ್ಲಿ ಅವರ ನೇಮಕಾತಿ ಆದೇಶವನ್ನು ಯಾವುದೇ ಮೂನ್ಸೂಚನೆ ಇಲ್ಲದೆ ರದ್ದುಗೊಳಿಸಲಾಗುವುದು ಮತ್ತು ಅಭ್ಯರ್ಥಿಯ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.
10. ಸದರಿ ಅಭ್ಯರ್ಥಿಗಳು ನಿಗದಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾದ ಬಗ್ಗೆ ಸರ್ಕಾರವನ್ನು ಒಳಗೊಂಡಂತೆ ಸಮಬಂಧಪಟ್ಟ ಎಲ್ಲಾ ಅಧಿಕಾರಿಗಳಿಗೆ ಸಿ.ಟಿ.ಸಿ.ಯನ್ನು ಕಳುಹಿಸತಕ್ಕದ್ದು.
11. ಈ ಆದೇಶದನ್ವಯ ನಿಗದಿತ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾಗದೆ ಇದ್ದರೆ ಉಪನಿರ್ದೇಶಕರು (ವಿಭಾಗೀಯ ಕಛೇರಿ) ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆ ಇವರು ಸರ್ಕಾರಕ್ಕೆ ವರದಿ ಮಾಡತಕ್ಕದ್ದು.
12. ನೇಮಕಗೊಂಡ ಅಭ್ಯರ್ಥಿಗಳು ಕಡ್ಡಾಯವಾಗಿ 6 ವರ್ಷಗಳ ಕಾಲ ಗ್ರಾಮಾಂತರ ಪ್ರದೇಶಗಳಲ್ಲಿ ಸೇವೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್.742

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, 6ನೇ ಮಹಡಿ, ಕಾವೇರಿ ಭವನ, ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕೆ.ಜಿ. ರಸ್ತೆ, ಬೆಂಗಳೂರು-560 009

### ಅಧಿಸೂಚನೆ

### ಟೆಂಡರ್ ಮತ್ತು ಬಹಿರಂಗ ಹರಾಜು

**ಕ್ರಮ ಸಂಖ್ಯೆ: ಡಿಪಿಎನ್: ವಾಹನ:1: 2006-07, ದಿನಾಂಕ:15ನೇ ನವಂಬರ್, 2006**

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಕಛೇರಿಯ ನಿರುಪಯುಕ್ತ ಮೋಟಾರು ವಾಹನವನ್ನು ಟೆಂಡರು ಮತ್ತು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಕೆಳಕಂಡ ವಾಹನವನ್ನು ನಿರುಪಯುಕ್ತವೆಂದು ಘೋಷಿಸಲಾಗಿದ್ದು, ಅದನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲು ತೀರ್ಮಾನಿಸಿದೆ. ಆದ್ದರಿಂದ ಈ ವಾಹನವನ್ನು ಟೆಂಡರ್ ಮತ್ತು ಬಹಿರಂಗ ಹರಾಜಿನ ಮೂಲಕ ಕೆ.ಹೆಚ್.ಟಿ. ಕಾಂಪ್ಲೆಕ್ಸ್, ಕಾವೇರಿಭವನ, ಕೆ.ಜಿ. ರಸ್ತೆ, ಬೆಂಗಳೂರು ಇಲ್ಲಿ ದಿನಾಂಕ:19.01.2007ರಂದು ಬೆಳಿಗ್ಗೆ 11.00 ಗಂಟೆಗೆ ಮಾರಾಟ ಮಾಡುವ ಬಗ್ಗೆ ಸಾರ್ವಜನಿಕರಿಗೆ ತಿಳಿಯಪಡಿಸಲು ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

| | | | |
|---|---|---|---|
| ಕ್ರಮ ಸಂಖ್ಯೆ | ಎಂಇಇ 9696 | ಅಂಬಾಸಿಡರ್ ಕಾರು (ಪೆಟ್ರೋಲ್) | 1976 |

ಮೇಲ್ಕಂಡ ನಿರುಪಯುಕ್ತ ಮೋಟಾರು ವಾಹನವನ್ನು ಸಾರ್ವಜನಿಕರ ತಪಾಸಣೆಗಾಗಿ ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿಭವನ, ಆವರಣದಲ್ಲಿ ನಿಲ್ಲಿಸಿದ್ದು ಸಾರ್ವಜನಿಕರು ಎಲ್ಲಾ ಕೆಲಸದ ದಿನಗಳಲ್ಲಿ ಕಛೇರಿಯ ವೇಳೆಯಲ್ಲಿ ಪರೀಕ್ಷಿಸಬಹುದಾಗಿದೆ. ಟೆಂಡರ್ ಫಾರಂಗಳನ್ನು ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಈ ಕಛೇರಿಯ ಆಡಳಿತಾಧಿಕಾರಿಯವರಿಂದ ಪಡೆದು ಭರ್ತಿ ಮಾಡಿದ ಫಾರಂಗಳನ್ನು ದಿನಾಂಕ:15.01.2007ರ ಒಳಗೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, 6ನೇ ಮಹಡಿ, ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿ ಭವನ, ಬೆಂಗಳೂರು-09 ಇವರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ. ಪ್ರಾಂತಿಯ ಸಾರಿಗೆ ಅಧಿಕಾರಿಗಳು, ಕೋರಮಂಗಲ ಇವರು ಸದರಿ ವಾಹನಕ್ಕೆ ರೂ.15,000-00ನ್ನು ನಿಗದಿಪಡಿಸಿರುತ್ತಾರೆ.

**ಸದಾಶಿವಮೂರ್ತಿ**
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು,
ಬೆಂಗಳೂರು.

### ಜಾಹಿರಾತು

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು, ಇವರ ಕಛೇರಿಗೆ ಸಂಬಂಧಿಸಿದ ಕೆಳಕಂಡ ಒಂದು ಮೋಟಾರು ವಾಹನವನ್ನು ದಿನಾಂಕ:19.01.2007ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರ್ ಮತ್ತು ಬಹಿರಂಗ ಹರಾಜಿನ ಮೂಲಕ ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿಭವನ ಆವರಣದಲ್ಲಿ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಟೆಂಡರ್ ಫಾರಂ ಇತರೆ ಮಾಹಿತಿಯನ್ನು ಈ ಕಛೇರಿಯ ಆಡಳಿತಾಧಿಕಾರಿಯವರಿಂದ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಭರ್ತಿ ಮಾಡಲಾದ ಟೆಂಡರ್ ಫಾರಂ ಅನ್ನು ಸಲ್ಲಿಸಲು ದಿನಾಂಕ:15.01.2007ರಂದು ಕೊನೆಯ ದಿನಾಂಕವಾಗಿರುತ್ತದೆ. ಇ.ಎಂ.ಡಿ. ಮೊತ್ತ 500-00 ರೂ.ಗಳಿಗೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಪಡೆದು ಟೆಂಡರ್ ಫಾರಂ ಜೊತೆ ಲಗತ್ತಿಸುವುದು.

### ಹರಾಜು ಮಾಡಲಾಗುವ ವಾಹನದ ವಿವರ

| ಕ್ರಮ ಸಂಖ್ಯೆ | ವಾಹನ ನೊಂದಣಿ ಸಂಖ್ಯೆ | ವಿವರ | ಮಾಡಲ್ ಖರೀದಿಸಿದ ವರ್ಷ |
|---|---|---|---|
| 1. | ಎಂಇಇ 9696 | ಅಂಬಾಸಿಡರ್ ಕಾರು | 1976 |

### ನಿಬಂಧನೆ ಮತ್ತು ಷರತ್ತುಗಳು

1. ಮೋಟಾರು ವಾಹನದ ಬಹಿರಂಗ ಹರಾಜನ್ನು ದಿನಾಂಕ:19.01.2007ರಂದು ಬೆಳಿಗ್ಗೆ 11.00 ಗಂಟೆಗೆ ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು ಈ ಆವರಣದಲ್ಲಿ ನಡೆಸಲಾಗುವುದು.
2. ಟೆಂಡರ್ ಫಾರಂಗಳನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಆಡಳಿತಾಧಿಕಾರಿಯವರಿಂದ ಪಡೆಯಬಹುದಾಗಿದೆ. ಫಾರಂಗಳಿಗಾಗಿ ಹಣವನ್ನು ಸಂದಾಯ ಮಾಡುವ ಅಗತ್ಯವಿಲ್ಲ.
3. ಟೆಂಡರ್ ಫಾರಂಗಳನ್ನು ದ್ವಿ ಪ್ರತಿಯಲ್ಲಿ ಸಲ್ಲಿಸಬೇಕು ಹಾಗೂ ಭರ್ತಿಮಾಡಿದ ಫಾರಂಗಳನ್ನು ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಮೊಹರು ಮಾಡಿದ ಲಕೋಟೆಗಳನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಹೆಸರಿನಲ್ಲಿ ಸಲ್ಲಿಸಬೇಕು. ಮತ್ತು ಲಕೋಟೆಯ ಮೇಲೆ "ಮೋಟಾರು ವಾಹನವನ್ನು ಖರೀದಿಸುವುದಕ್ಕಾಗಿ ಟೆಂಡರ್ ಫಾರಂ" ಎಂದು ನಮೂದಿಸಬೇಕು.
4. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು (ಇ.ಎಂ.ಡಿ.) ಅರ್ನೆಸ್ಟ್ ಮನಿ ಡಿಪಾಸಿಟ್‌ನೊಂದಿಗೆ (ಡಿಮ್ಯಾಂಡ್ ಡ್ರಾಫ್ಟ್‌ನ್ನು ಮಾತ್ರ ಸಲ್ಲಿಸಬೇಕು) ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು ಮತ್ತು ಲಕೋಟೆಯನ್ನು ಆಡಳಿತಾಧಿಕಾರಿಯವರಿಗೆ ಸಲ್ಲಿಸಿ ಸ್ವೀಕೃತಿಯನ್ನು ಪಡೆಯಬಹುದು.
5. ಟೆಂಡರ್ ಫಾರಂಗಳಲ್ಲಿ ಮೋಟಾರು ವಾಹನಕ್ಕೆ ನಮೂದಿಸಲಾಗುವ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಪದಗಳಲ್ಲಿ ಸ್ಪಷ್ಟವಾಗಿ ಬರೆಯಬೇಕು.
6. ಟೆಂಡರ್ ಫಾರಂನ್ನು ವರ್ಗಾಯಿಸಬಾರದು.
7. ಪ್ರತಿ ಟೆಂಡರ್ ಫಾರಂನೊಂದಿಗೆ 500-00 ರೂ.ಗಳ (ರೂ. ಐದು ನೂರು ಮಾತ್ರ) ಅರ್ನೆಸ್ಟ್ ಮನಿ ಡಿಪಾಸಿಟನ್ನು ಸಲ್ಲಿಸಿರಬೇಕು. ಅರ್ನೆಸ್ಟ್ ಮನಿ ಡಿಪಾಸಿಟ್‌ನ ಮೊತ್ತ 500-00 ರೂ.ಗಳನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆಯಲಾದ ಡಿಮ್ಯಾಂಡ್ ಡ್ರಾಫ್ಟ್ (ಡಿ.ಡಿ.) ಮೂಲಕ ಮಾತ್ರ ಸಲ್ಲಿಸಬೇಕು. ಅರ್ನೆಸ್ಟ್ ಮಾಡಿ ಡಿಪಾಸಿಟ್‌ನ ಮೊತ್ತವನ್ನು ನಗದು ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ. ಡಿಪಾಸಿಟ್ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ. ಮೊತ್ತಕ್ಕೆ ಬಡ್ಡಿಯನ್ನು ಕೊಡಲಾಗುವುದಿಲ್ಲ.

8. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕ:15.01.2007ರಂದು ಸಂಜೆ 5 ಗಂಟೆಯೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಬೇಕು. ದಿನಾಂಕ:15.01.2007ರ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
9. 500-00 ರೂ.ಗಳ ಇ.ಎಂ.ಡಿ. ಯೊಂದಿಗೆ ಟೆಂಡರ್ ಫಾರಂನ್ನು ಸಲ್ಲಿಸುವವರು ಸಹ ದಿನಾಂಕ:19.01.2007ರಂದು ಬೆಳಿಗ್ಗೆ 11.00 ಗಂಟೆಗೆ ನಡೆಸಲಾಗುವ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ. ಹೀಗೆ ಬಹಿರಂಗ ಹರಾಜಿನಲ್ಲಿ ಭಾಗವಹಿಸುವುದಕ್ಕಾಗಿ ಇವರು ಪುನಃ ಇ.ಎಂ.ಡಿ. ಯನ್ನು ಕೊಡಬೇಕಿಲ್ಲ.
10. ಮೋಟಾರು ವಾಹನದ ಬೆಲೆಯನ್ನು ಅಂಕಿ ಮತ್ತು ಪದಗಳಲ್ಲಿ ಸ್ಪಷ್ಟವಾಗಿ ನಮೂದಿಸಿದ ಟೆಂಡರ್ ಫಾರಂನ್ನು ತಿರಸ್ಕರಿಸಲಾಗುವುದು. ಟೆಂಡರ್‌ನಲ್ಲಿ ನಮೂದಿಸಲಾಗುವ ಮೊತ್ತದಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಟೆಂಡರ್ ಫಾರಂನ್ನು ಸಲ್ಲಿಸುವವರು ಪೂರ್ಣ ಸಹಿ ಮಾಡಿ ದೃಢೀಕರಿಸಿರಬೇಕು.
11. ಸಾರ್ವಜನಿಕ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ದಿನಾಂಕ:19.01.2007ರಂದು ಬೆಳಿಗ್ಗೆ 11 ಗಂಟೆಯೊಳಗೆ 500-00 ರೂ.ಗಳ ನಗದು ಠೇವಣಿಯನ್ನು ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರಿಗೆ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. 500-00 ರೂ.ಗಳ ಠೇವಣಿಯನ್ನು ಪಾವತಿ ಮಾಡದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ರೂ.500-00 ಗಳ ಠೇವಣಿ ಹಣವನ್ನು ವಾಪಸ್ ಕೊಡಲಾಗುವುದು. ಹರಾಜಿನಲ್ಲಿ ಯಶಸ್ವಿಯಾದವರಿಗೆ ಠೇವಣಿ ಹಣವನ್ನು ಕೂಡಲೇ ವಾಪಸ್ ಕೊಡಲಾಗುವುದಿಲ್ಲ.
12. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಮೇಲು ಉಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದಿನಾಂಕ:19.01.2007ರಂದು ಹರಾಜನ್ನು ನಡೆಸುವರು. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಮೋಟಾರು ವಾಹನಕ್ಕೆ ತಮ್ಮ ಬೆಲೆಯನ್ನು ಕೂಗಬಹುದಾಗಿದೆ.
13. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಹರಾಜಿನ ನಂತರ ಮೊಹರಾದ ಟೆಂಡರ್‌ಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟ್‌ರವರು ಯಾರು ಹಾಜರಿರುತ್ತಾರೋ ಅವರ ಸಮ್ಮುಖದಲ್ಲಿ ಅದೇ ದಿನದಂದು ಒಡೆಯಲಾಗುವುದು. ಹರಾಜಿನಲ್ಲಿ ಅಥವಾ ಟೆಂಡರ್‌ನಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೋ ಅಂತಹ ಟೆಂಡರ್: ಹರಾಜನ್ನು ಪರಿಗಣಿಸಲಾಗುವುದು ಮತ್ತು ಸ್ವೀಕರಿಸಲಾಗುವುದು.
14. ಮುಂಗಡ ಪಾವತಿ: ಯಶಸ್ವಿಯಾದ ಬಿಡ್ಡುದಾರರು ಒಟ್ಟು ಮೊತ್ತದಲ್ಲಿ ಶೇಕಡಾ 25ರಷ್ಟು ಮೊತ್ತವನ್ನು ಕೂಡಲೇ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಲೆಕ್ಕಶಾಖೆಯಲ್ಲಿ ನಗದು ಹಣವನ್ನು ಪಾವತಿ ಮಾಡತಕ್ಕದ್ದು. ನಮ್ಮ ಸ್ವೀಕೃತಿ ಪತ್ರ ಬಿಡ್ಡುದಾರರಿಗೆ: ಟೆಂಡರ್‌ದಾರರಿಗೆ ತಲುಪಿದ 8 ದಿನಗಳೊಳಗಾಗಿ ಬಾಕಿ ಶೇಕಡಾ 75ರಷ್ಟು ಮೊತ್ತ ಮತ್ತು ತೆರಿಗೆ ಹಣವನ್ನು ಪಾವತಿ ಮಾಡತಕ್ಕದ್ದು ಹಾಗೂ ಮೋಟಾರು ವಾಹನವನ್ನು ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ಡಿನ: ಟೆಂಡರಿನ ಪೂರ್ತಿ ಮೊತ್ತವನ್ನು ಪಾವತಿಮಾಡಿ ವಾಹನವನ್ನು ತೆಗೆದುಕೊಳ್ಳದಿದ್ದಲ್ಲಿ ಬಿಡ್ಡುದಾರರು ಟೆಂಡರುದಾರರ ಬಿಡ್ಡನ್ನು ರದ್ದುಗೊಳಿಸಲಾಗುವುದು ಹಾಗೂ ಮೋಟಾರು ವಾಹನವನ್ನು ಮಾರಾಟ ಮಾಡುವುದಕ್ಕೆ ಪ್ರತ್ಯೇಕವಾಗಿ ಕ್ರಮವನ್ನು ತೆಗೆದುಕೊಳ್ಳಲಾಗುವುದು. ಹಣವನ್ನು ಪಾವತಿ ಮಾಡುವುದಕ್ಕೆ ಸಂಬಂಧಿಸಿದಂತೆ ಹುಂಡಿಗಳನ್ನು ಅಥವಾ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸ್ವೀಕರಿಸಲಾಗುವುದಿಲ್ಲ.
15. ಎಲ್ಲಾ ನಗದು ಪಾವತಿಗಳನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿಯ ಲೆಕ್ಕ ಶಾಖೆಯಲ್ಲಿ ಮಾತ್ರ ಮಾಡತಕ್ಕದ್ದು.
16. ಟೆಂಡರ್‌ದಾರರು: ಬಿಡ್ಡುದಾರರು ಪಾವತಿ ಮಾಡಿರುವ ಅರ್ನೆಸ್ಟ್ ಮನಿ ಠೇವಣಿ ಹಣವನ್ನು ಮೋಟಾರು ವಾಹನದ ಬಾಕಿ ಇರುವ ಶೇಕಡಾ 75ರಷ್ಟು ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಬಿಡ್ಡುದಾರರು ಎಲ್ಲಾ ನಿಬಂಧನೆ ಮತ್ತ ಷರತ್ತುಗಳನ್ನು ಪೂರೈಸಿ ಮೋಟಾರು ವಾಹನವನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಅರ್ನೆಸ್ಟ್ ಠೇವಣಿ ಮೊತ್ತ 500-00 ರೂ.ಗಳನ್ನು ಲೆಕ್ಕ ಶಾಖೆಯಿಂದ ವಾಪಸ್ ಪಡೆಯಬಹುದಾಗಿದೆ.
17. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಈ ಮೋಟಾರು ವಾಹನದ ಮಾರಾಟವನ್ನು ದೃಢೀಕರಿಸಿದ ನಂತರ ಸಂಬಂಧಪಟ್ಟ ಬಿಡ್ಡುದಾರರಿಗೆ: ಟೆಂಡರ್‌ದಾರರಿಗೆ ಮೋಟಾರು ವಾಹನವನ್ನು ವಿಲೇವಾರಿ ಮಾಡಲಾಗುವುದು.
18. ಯಶಸ್ವಿ ಬಿಡ್ಡುದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟು ಮಾಡಿದ್ದಲ್ಲಿ ನಷ್ಟದ ಮೊತ್ತವನ್ನು ಅರ್ನೆಸ್ಟ್ ಮನಿ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಕಾನೂನಿನ ಕ್ರಮವನ್ನು ಸಹ ಜರುಗಿಸಲಾಗುವುದು.
19. ಮಾರಾಟ ತೆರಿಗೆ ಮತ್ತು ಇತರೆ ಛಾರ್ಜ್‌ಗಳನ್ನು ಮಾರಾಟದ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ (ಬಿಡ್ಡಿನ ಅಥವಾ ಹರಾಜಿನ ಮೊತ್ತಕ್ಕೆ) ವಿಧಿಸಲಾಗುವುದು.
20. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಯಾವುದೇ ಕಾರಣವನ್ನು ನೀಡದೆ ಟೆಂಡರ್: ಹರಾಜನ್ನು ಸ್ವೀಕರಿಸುವ, ತಿರಸ್ಕರಿಸುವ ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ತೀರ್ಮಾನವೇ ಅಂತಿಮವಾಗಿರುತ್ತದೆ ಮತ್ತು ಅವರ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಬೇಕಾಗಿರುತ್ತದೆ.
21. ಯಶಸ್ವಿ ಬಿಡ್ಡುದಾರರು: ಟೆಂಡರುದಾರರು ತಮ್ಮ ಸ್ವಂತ ವೆಚ್ಚದಿಂದ ಮೋಟಾರು ವಾಹನಗಳ ಸಾಗಾಣಿಕೆಗಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.
22. ಈ ಮೋಟಾರು ವಾಹನಗಳ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ನಿರ್ಣಯ ಅಂತಿಮವಾಗಿದೆ.
23. ಮಾರಾಟ ಮಾಡಲಾಗುವ ಮೋಟಾರು ವಾಹನಗಳನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ರವರ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದ್ದು, ಎಲ್ಲಾ ಕೆಲಸದ ದಿನಗಳಂದು ಕಛೇರಿಯ ವೇಳೆಯಲ್ಲಿ ವಾಹನಗಳನ್ನು ಸಾರ್ವಜನಿಕರು ಪರೀಕ್ಷಿಸಬಹುದಾಗಿದೆ.
24. ಈ ಸಂಬಂಧದಲ್ಲಿ ಹೆಚ್ಚಿನ ಮಾಹಿತಿಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಆಡಳಿತಾಧಿಕಾರಿಯವರಿಂದ ಪಡೆಯಬಹುದು.

**ಸದಾಶಿವಮೂರ್ತಿ**

ಪಿ.ಆರ್.739

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು,
ಬೆಂಗಳೂರು.

## ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ
## ಉಪ ನಿರ್ದೇಶಕರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89
## ಅಮರಾಯಿ ಫಸಲಿನ ಹರಾಜು ಇಸ್ತಿಹಾರ್

**ಸಂಖ್ಯೆ: ಉನಿ: ಜಾಸಂಕ್ಷೇ: ಸಿ3: ಜಮಾ ಫಸಲು: ಹರಾಜು: 2006-07, ದಿನಾಂಕ:23ನೇ ನವಂಬರ್, 2006**

ಈ ಮೂಲಕ ಸಮಸ್ತ ಜನಗಳಿಗೆ ತಿಳಿಯಪಡಿಸುವುದೇನೆಂದರೆ ಈ ಕ್ಷೇತ್ರದ 2006-07 ನೇ ಸಾಲಿನ ಹುಣಸೆ ಫಸಲು-304 ಮರ, ಹೊಂಗೆ ಫಸಲು-75 ಮರ, ಹೆಪ್ಪೆ ಫಸಲು-14 ಮರ, ಬೇವಿನ ಫಸಲು-193 ಮರ, ತೆಂಗಿನ ಫಸಲು-296 ಮರ, ಹಲಸಿನ ಫಸಲು-15 ಮರ ಹಾಗೂ ಮಾವಿನ ಫಸಲು-10 ಮರಗಳ ಫಸಲುಗಳನ್ನು ದಿನಾಂಕ:08.01.2007ರ ಸೋಮವಾರದಂದು ಬೆಳಿಗ್ಗೆ 11.00 ಗಂಟೆಯ ಮೇಲೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟದ ಈ ಕಛೇರಿ ಆವರಣದಲ್ಲಿ ಈ ಕೆಳಕಂಡ ನಿಬಂಧನಗಳಿಗೆ ಒಳಪಟ್ಟು ಬಹಿರಂಗವಾಗಿ ಹರಾಜು ಮಾಡಲಾಗುವುದು.

**ನಿಬಂಧನೆಗಳು:**

1. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 2,000-00 (ರೂಪಾಯಿ ಎರಡು ಸಾವಿರ ಮಾತ್ರ) ಗಳನ್ನು ನಗದು ರೂಪದಲ್ಲಿ ಹರಾಜು ನಡೆಸುವ ಅಧಿಕಾರಿಗಳಲ್ಲಿ ಮುಂಗಡ ಠೇವಣಿ ಸಂದಾಯ ಮಾಡಿ ಹರಾಜಿನಲ್ಲಿ ಬಾಗವಹಿಸತಕ್ಕದ್ದು.
2. ಹರಾಜಿನಲ್ಲಿ ಯಶಸ್ವಿಯಾಗದವರ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಹಿಂದಿರುಗಿಸಲಾಗುವುದು.
3. ಹರಾಜು ಮುಗಿದ ಕೂಡಲೇ ಯಶಸ್ವಿ ಹರಾಜುದಾರರು ಹರಾಜಿನ ಪೂರ್ಣ ಮೊಬಲಗು ಹಾಗೂ ಇತರೆ ತೆರಿಗೆಯನ್ನು ಪಾವತಿ ಮಾಡಿ ರಸೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪುನಃ ಹರಾಜು ಮಾಡಲಾಗುವುದು. ಆದ್ದರಿಂದ ಆದ ನಷ್ಟದ ಮೊಬಲಗನ್ನು ಮೊದಲನೆಯ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಹರಾಜುದಾರರು ಅದಕ್ಕೆ ಅರ್ಹರಾಗುವುದಿಲ್ಲ.
4. ಹರಾಜನ್ನು ಇದೇ ಇಲಾಖೆಯ ಆಯುಕ್ತರು, ಪಶುಪಾಲನಾ ಇಲಾಖೆ, ಕರ್ನಾಟಕ, ಬೆಂಗಳೂರು ಇವರಿಂದ ಅಥವಾ ಇವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು. ಮತ್ತು ಹರಾಜಿನ ಯಾವ ಬಗೆಯ ಅಂತಿಮ ನಿರ್ಧಾರವು ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
5. ಹರಾಜಿನಲ್ಲಿ ಕೊಂಡ ಎಲ್ಲಾ ಫಸಲನ್ನು ಎಲ್ಲಾ ವಿಧದಲ್ಲಿಯೂ ಕಾಪಾಡಿಕೊಂಡು ಹೋಗುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಮತ್ತು ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ. ಹಾಗೂ ಈ ಫಸಲನ್ನು ಅಂದರೆ ಹರಾಜು ನಡೆದ ದಿನಾಂಕದಿಂದ 31.12.2007ರವರೆಗೆ ಅನುಭವಿಸುವುದಕ್ಕೆ ಮಾತ್ರ ಅರ್ಹರಾಗಿರುತ್ತಾರೆ.
6. ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟವೇನಾದರೂ ಉಂಟಾದರೆ ಹರಾಜುದಾರನೇ ತಮ್ಮ ಸ್ವಂತ ಖರ್ಚಿನಿಂದ ಸರಿಪಡಿಸಿಕೊಡಬೇಕು.
7. ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.
8. ಹರಾಜಿನ ಇತರೆ ಮಾಹಿತಿಗಳು ಬೇಕಾದ ಪಕ್ಷದಲ್ಲಿ ಈ ಕಛೇರಿಯ ಎಲ್ಲಾ ಕೆಲಸದ ದಿನಗಳಲ್ಲಿ ಕೇಳಿ ಪಡೆದುಕೊಳ್ಳಬಹುದು.

**ಡಾ:ಎ.ಎಸ್. ರಂಗಸ್ವಾಮಿ**
ಉಪ ನಿರ್ದೇಶಕರು,
ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ,
ಬೆಂಗಳೂರು-89.

ಪಿ.ಆರ್.740

## ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಬೆಂಗಳೂರು-100
## ಪ್ರಕಟಣೆ

**ಸಂಖ್ಯೆ: ಕೇಕಾಬೆಂ/ ಕಾವಿ/ ಅಂಗಡಿಮಳಿಗೆ/ 8181/ 2006-07, ದಿನಾಂಕ:15ನೇ ನವಂಬರ್, 2006**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಬಹಿರಂಗ ಹರಾಜು ಮೂಲಕ ಸ್ಪರ್ಧಾತ್ಮಕ ದರಗಳನ್ನು ಕರೆದು 2006-07ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ನೀಡುವ ಬಹಿರಂಗ ಹರಾಜನ್ನು **ದಿನಾಂಕ:22.12.2006 ರಂದು ಬೆಳಿಗ್ಗೆ 11.00 ಗಂಟೆಗೆ** ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4400ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮ್ಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿ ಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ.ಸಂ. | ವಾಣಿಜ್ಯ ಮಳಿಗೆಯ ಹೆಸರು/ ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯನ್ನು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುವು ಠೇವಣಿ |
|---|---|---|---|---|---|---|
| 1. | ಉಪಹಾರ ಗೃಹ-07 | (6.85x6) (2 ಯೂನಿಟ್) | 11 ತಿಂಗಳು | 1960/- | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು. | 2,000/- |
| 2. | ಬೇಕರಿ-03 | (6.85x6) (2 ಯೂನಿಟ್) | 11 ತಿಂಗಳು | 1960/- | | 2,000/- |
| 3. | ಹಿಟ್ಟಿನ ಗಿರಣಿ-11 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |

| ಕ್ರ.ಸಂ. | ವಾಣಿಜ್ಯ ಮಳಿಗೆಯ ಹೆಸರು/ ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯನ್ನು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|---|---|
| 4. | ಸಲೂನ್-01 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |
| 5. | ವರ್ಕ್‌ಶಾಪ್-10 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |
| 6. | ದಿನಸಿ ಅಂಗಡಿ-05 | (6.85x6) (2 ಯೂನಿಟ್) | 11 ತಿಂಗಳು | 1960/- | | 2,000/- |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳು ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಕೇಂದ್ರ ಕಾರಾಗೃಹ, ಬೆಂಗಳೂರು.

ಪಿ.ಆರ್.743

**PUBLIC WORKS DEPARTMENT**
**(NATIONAL HIGHWAY)**
**OFFICE OF THE EXECUTIVE ENGINEER, NATIONAL HIGHWAY DIVISION, URVA STORE, ASHOK NAGAR, MANGALORE-575006, PHONE NO.2450415**
**TENDER NOTIFICATION**
**(TWO COVER BID SYSTEM)**
**No. NHD/ MNG/ AE-2/ CRF/ NIT/ 2006-07/ 4001, Dated:17th November, 2006**

Sealed item rate Tenders for the works noted below under TWO COVER BID SYSTEM as per Karnataka Transparency in Public Procurement Ordinance 2000 and Act 2000 in prescribed form in duplicate is invited from the Class-I contractors registered in KPWD. Two cover bid system of Tendering Consists of "Technical Bid" and "Financial Bid". Bids will be received in two parts in two different sealed covers marked as "Technical Bid" and "Financial Bid". These two covers shall be sealed and kept in another sealed cover duly superscribing Name of Work and shall be addressed to the undersigned with name and full postal address of the bidder. Completed bid will be received in the office of the Superintending Engineer, N.H. Circle, Bangalore OR in the office of the Executive Engineer, National Highway Division, Urva Store, Mangalore up to **4 PM on 21.12.2006,** subject to the conditions laid down in Form No. PWG-65 & 66 of KPWD code Vol-II and in Karnataka Transparancy in Public Procurement ordinance 2000 and Act 2000. The Technical Bid will be opened by the undersigned on the dates noted below. Financial Bid of only those bidders who qualify in the Technical Bid shall be opened. If any one of the dates noted below happens to be a general holiday, the next working day will hold good.

| Sl. No. | Name of Work | Amount put to Tender (In Rs) | E.M.D. (In Rs) | Cost of Tender Forms (In Rs.) Non-refundable Including Taxes | Nature of Work | Time for completion of work (Excluding Monsoon) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | Improvements to C.M. Road to Dabbe via H. Hosahalli from KM 0.00 to 7.45 in Hassan District. (Job No: CRF-793-KNT-2006) | 58,70,500 | 58,800 | 10,000 | WBM/ SDBC | 7 months |

**CONDITIONS:**

1. Pre qualification requirements are detailed inthe Technical Bid. Each Tenderer shall use following machinery and submit evidence of ownership/ pocession as detailed below, at the time of submission of application. The documents shall be attested by a Distric level Officer, or otherwise the application will not be accepted.

| Machinery | Numbers | Evidence of ownership to be furnished |
|---|---|---|
| i) Hot Mix Plant of "Above 40 to 60 T.P.H. "capacity (as per MOST specification) | 1 | Purchase invoice/ Sale deed with a copy of Purhcase invoice from the seller. |
| ii) Paver Finisher | 1 | - Do- |
| iii) Mechanical sprayers | 2 | -Do- |
| iv) Vibratory Road Roller | 1 | -Do- |
| v) Static Road Roller | 2 | -Do- |
| vi) Tippers | 4 | Registration Certificate from R.T.O. |

2. The contractors interested in bidding for the work may submit an application to the undersigned along with cost of Tender documents to be paid in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration while submitting the application for Tender schedules, otherwise the application will not be considered.
3. Each Tenderer should have completed satisfactorly similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contractor should have completed a billing of 30% of the value of the intended contract during the current financial year for similar works. The work experience certificate in this regard should invariably have mention of same nature/ items of work executed, along with date of commencement and date of completion; otherwise the technical bid is liable for disqualification.
4. For proof of Financial Capacity 'Line of Credit' from any Nationalized Bank or Schedule Bank shall invariably be produced in the prescribed proforma of Technical Bid for an amount equal to 50% of the amount put to Tender for works. Non-Production of this certificate will lead to disqualification of the Tender.
5. The EMD in the form of FDR/ DD/ Bankers Cheque/ Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed to the **Technical Bid.** The Bank Guarantee Shall be in the Form as specified in PWG 6 supplied with the Tender form. Otherwise Tender will be rejected. Regarding the validity of EMD, Tender condition etc. PWG-66 shall be referred and is binding on the Tenderer.
6. **The Schedule of dates is as follows:**
   a. Last date for receipt of Application upto : 18.12.2006 in office hours
   b. Issue of Blank Tender schedules on : 18.12.2006 in office hours.
   c. Last date for submission of Technical & Financial Bid : 21.12.2006 upto 4.00 PM
   d. Opening of Technical Bid (if possible) : 21.12.2006 upto 4.30 PM (if Possible)
7. All documents enclosed in support of Technical Bids shall be attested by a **DISTRICT LEVEL OFFICER.** Otherwise, the bids are liable for disqualification. The original documents should be produced for verification on the day of opening of Technical Bid or otherwise Tenders will be disqualified.
8. Financial Bids of the Technically qualified Tenderers will be opened in the office of the Executive Engineer, National Highway Division, Mangalore on the date and time to be intimated in due Course.
9. Only relevant certificates and details shall be furnished with the Technical Bid. **Details of company/ agencies/ Firms profiles need not be enclosed.**
10. The competent authority reserves the right to reject any or all Tenders without assigning any reason there off.
11. The Tendering by Joint venture is not allowed.

Any other details regarding the work can be obtained from the above office during the office hours.

Executive Engineer,
National Highway Division, Mangalore.

PR-741

**ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು-560 001**

**ತಿದ್ದುಪಡಿ**

**ಟೆಂಡರ್ ನೋಟಿಫಿಕೇಷನ್ ಸಂ.ಆಪಸಂ/ ಡಿವಿಡಿ/ 8/ ಟೆಂಡರ್/ 2005-06, ದಿನಾಂಕ:13ನೇ ಅಕ್ಟೋಬರ್, 2006**

ಕರ್ನಾಟಕ ರಾಜ್ಯ ಪತ್ರ, ಗುರುವಾರ, ಅಕ್ಟೋಬರ್ 26, 2006 ರ ಭಾಗ-5ರಲ್ಲಿ (ಪುಟ ಸಂಖ್ಯೆ 1300) ಪ್ರಕಟಗೊಂಡಿರುವ ಟೆಂಡರ್ ನೋಟಿಫಿಕೇಷನ್‌ನ 5ನೇ ಪ್ಯಾರಾದಲ್ಲಿ,

"ಎಲ್ಲಾ ಟೆಂಡರ್‌ಗಳ ಅವಶ್ಯಕತೆಯಿರುವ ಇ.ಎಂ.ಡಿ. ಮತ್ತು ಡಾಕ್ಯುಮೆಂಟ್ಸ್ ಹಾಗೂ ಪ್ರಮಾಣ ಪತ್ರಗಳೊಂದಿಗೆ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, 2ನೇ ಮಹಡಿ, ಸರ್.ಎಂ. ವಿಶ್ವೇಶ್ವರಯ್ಯ ಚಿಕ್ಕಗೋಪುರ, ಡಾ: ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು-560 001 ಇವರಿಗೆ ದಿನಾಂಕ:01.12.2006ರಂದು" ಎಂಬುದಾಗಿ ಪ್ರಕಟಗೊಂಡಿದ್ದು ಇದನ್ನು "ದಿನಾಂಕ:11.12.2006 ರಂದು ಸಂಜೆ 5.30 ಗಂಟೆಯೊಳಗೆ ಸಲ್ಲಿಸಬೇಕು" ಎಂಬುದಾಗಿ ಓದಿಕೊಳ್ಳುವುದು.

ನಿರ್ದೇಶಕರು ಮತ್ತು ಟೆಂಡರ್ ಆಹ್ವಾನಿಸುವ ಸಮಿತಿ ಅಧ್ಯಕ್ಷರು,
ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ,
ಬೆಂಗಳೂರು-560 001.

ಪಿ.ಆರ್.746

# ಜಲ ಸಂಪನ್ಮೂಲ ಇಲಾಖೆ
## (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಧಾರವಾಡ
## ಟೆಂಡರ್ ಅಧಿಸೂಚನೆ
## (ದ್ವಿ ಲಕೋಟೆ ಪದ್ಧತಿ)

**ಸಂಖ್ಯೆ: ಕಾಇಂ/ ಸನೀವಿಧಾ/ ಪಿ.ಬಿ.-2/ ಆರ್.ಐ.ಡಿ.ಎಫ್.-8/ ಟೆಂಡರ್/ 2006-2007/ 3747, ದಿನಾಂಕ:7ನೇ ನವಂಬರ್, 2006**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ರಾಜ್ಯ ಲೋಕೋಪಯೋಗಿ ಸಂಹಿತೆ ಪಿಡಬ್ಲ್ಯೂಜಿ 65 ಮತ್ತು 66 ಹಾಗೂ ಕರ್ನಾಟಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಆಕ್ಟ್ 2000 ಮತ್ತು ಅದರ ಇತ್ತೀಚಿನ ತಿದ್ದುಪಡಿಗಳಂತೆ ಕರ್ನಾಟಕ ರಾಜ್ಯದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಲಿ ನೋಂದಾಯಿಸಿರುವ ಪ್ರಥಮ ದರ್ಜೆ (ಸಿವ್ಹಿಲ್) ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಳಿಗಾಗಿ ಐಟಂರೇಟ್ ಡೆಂಡರನ್ನು ದ್ವಿಲಕೋಟೆ ಪದ್ಧತಿಯಂತೆ ದ್ವಿಪ್ರತಿಗಳಲ್ಲಿ ಸಲ್ಲಿಸಲು ಕರೆಯಲಾಗಿದೆ. ದ್ವಿಲಕೋಟೆಗಳಲ್ಲಿ ಒಂದು ತಾಂತ್ರಿಕ ಬಿಡ್ ಎರಡನೆಯದು ಆರ್ಥಿಕ ಬಿಡ್ ಆಗಿರುತ್ತದೆ. ತಾಂತ್ರಿಕ ಬಿಡ್‌ನ್ನು ಪ್ರಥಮ ಹಂತದಲ್ಲಿ ತೆಗೆಯಲಾಗುವುದು. ತದ ನಂತರ ತಾಂತ್ರಿಕ್ ಬಿಡ್‌ನಲ್ಲಿ ಪಡೆದ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತೆರೆದು ವಿಶ್ಲೇಷಿಸಲಾಗುವುದು.

ಕಾಮಗಾರಿಯ ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಹ ಗುತ್ತಿಗೆದಾರರು ಅರ್ಜಿಯನ್ನು ಕಾರ್ಯನಿರ್ವಾಹಕ ಅಭಿಯಂತರು ಸಣ್ಣ ನೀರಾವರಿ ವಿಭಾಗ ಧಾರವಾಡ ಕಛೇರಿಯಲ್ಲಿ ಟೆಂಡರ್ ಪುಸ್ತಕಗಳ ಬೆಲೆಯೊಂದಿಗೆ (ಹಿಂದಿರುಗಿಸಲಾಗುವುದಿಲ್ಲ) ಸಲ್ಲಿಸುವುದು. ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ., ಧಾರವಾಡ ಇವರ ಕಛೇರಿಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ನೀಡಲಾಗುವುದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ಸ್ವವಿಳಾಸವಿರುವ 35 ಸೆಂ.ಮೀ. *25 ಸೆಂ.ಮೀ. ಅಳತೆಯ ಲಕೋಟೆಯನ್ನು ರೂಪಾಯಿ 160.00 ಗಳ ಅಂಚೆ ಲಕೋಟೆಯನ್ನು ಲಗತ್ತಿಸಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು ಅಂಚೆ ಸೇವೆಯಲ್ಲಿನ ವಿಳಂಬಕ್ಕೆ ಈ ಇಲಾಖೆಯು ಜವಾಬ್ದಾರಿ ಇರುವುದಿಲ್ಲ. ಗುತ್ತಿಗೆಗೆ ಸಂಬಂಧಿಸಿದ ನಕ್ಷೆ ಹಾಗೂ ಅಂದಾಜು ಪತ್ರಿಕೆ ಇತ್ಯಾದಿ ವಿವರಗಳನ್ನು ಕಛೇರಿಯ ಸಮಯದಲ್ಲಿ ಗುತ್ತಿಗೆದಾರರು ಪರಿಶೀಲಿಸಬಹುದು, ನಮೂದಿಸಿದ ದಿನಗಳು ಸಾರ್ವತ್ರಿಕ ರಜೆ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

ಭರ್ತಿ ಮಾಡಿದ ಮೊಹರ್ ಬಂದ ಟೆಂಡರ್‌ಗಳನ್ನು ಏಕ ಕಾಲದಲ್ಲಿ ಸದರಿ ಕಾಮಗಾರಿಗಾಗಿ ಈ ಕೆಳಗಿನ ಅಧಿಕಾರಿಗಳ ಕಛೇರಿಗಳಲ್ಲಿ ಇರಿಸಿದ ಮೊಹರ್ ಮಾಡಿದ ಟೆಂಡರ್ ಪೆಟ್ಟಿಗೆಗಳಲ್ಲಿ ನಿಗದಿತ ಸಮಯದಲ್ಲಿ ಸ್ವೀಕರಿಸಲಾಗುವುದು.

1) ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಧಾರವಾಡ.
2) ಅಧೀಕ್ಷಕ ಅಭಿಯಂತರು, ಸಣ್ಣ ನೀರಾವರಿ ವೃತ್ತ ಬೆಳಗಾವಿ.
3) ಮುಖ್ಯ ಅಭಿಯಂತರು, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ.

**ಕಾಮಗಾರಿಯ ಹೆಸರು**

| | | |
|---|---|---|
| | | ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲ್ಲೂಕಿನ ಅಂತರವಳ್ಳಿ ಹತ್ತಿರ ಕೆರೆಯ ಒಡ್ಡು. ವೇಸ್ಟ್‌ವಿಯರ್ ಹಾಗೂ ಕಾಲುವೆಗಳ ನಿರ್ಮಾಣ ಕಾಮಗಾರಿ (ಬಾಕಿ ಕೆಲಸ) |
| 1) | ಟೆಂಡರಿಗೆ ಅಳವಡಿಸಿದ ಕಾಮಗಾರಿಯ ಮೊತ್ತ | ರೂ.282.70 ಲಕ್ಷ |
| 2) | ಮುಂಗಡ ಠೇವಣಿ ಮೊತ್ತ (ಇಎಂಡಿ 90 ದಿನಗಳ ಚಾಲ್ತಿಯಲ್ಲಿ ಇರಬೇಕು) | ರೂ.2.827 ಲಕ್ಷ |
| 3) | ಖಾಲಿ ಟೆಂಡರ್ ಪುಸ್ತಕಗಳ ಬೆಲೆ | ರೂ.20000.00+ತೆರಿಗೆ |
| 4) | ಕಾಮಗಾರಿಯನ್ನು ಪೂರ್ಣಗೊಳಿಸುವ ಕಾಲಾವಕಾಶ | 9 ತಿಂಗಳು (ಮಳೆಗಾಲ ಸಹಿತ) |
| 5) | ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ (ಕಛೇರಿ ವೇಳೆಯಲ್ಲಿ) | 14.12.2006 |
| 6) | ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡುವ ದಿನಾಂಕ (ಕಛೇರಿ ವೇಳೆಯಲ್ಲಿ) | 22.12.2006 |
| 7) | ಭರ್ತಿ ಮಾಡಿದ ಮೊಹರ್ ಬಂದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಲಕೋಟೆ, ಆರ್ಥಿಕ ಬಿಡ್ ಲಕೋಟೆ, ಪ್ರತ್ಯೇಕವಾಗಿ ದ್ವಿಪ್ರತಿಗಳಲ್ಲಿ) | 29.12.2006 ಸಾಯಂಕಾಲ 4.00 ಗಂಟೆವರೆಗೆ |
| 8) | ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ | ತದನಂತರ ತಿಳಿಸಲಾಗುವುದು |
| 9) | ಅರ್ಹ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ | ತದನಂತರ ತಿಳಿಸಲಾಗುವುದು. |

**ಷರತ್ತುಗಳು:**

1. ಟೆಂಡರ್ ಖಾಲಿ ಪುಸ್ತಕಗಳನ್ನು ಪಡೆಯಲು ಇಚ್ಛಿಸುವ ಗುತ್ತಿಗೆದಾರರು ಅರ್ಜಿಯ ಜೊತೆ ನೋಂದಾಯಿಸಿದ ಪ್ರಮಾಣ ಪತ್ರದ ಪ್ರತಿ, ಸೇಲ್ಸ್ ಟ್ಯಾಕ್ಸ್ ಮತ್ತು ಇನ್ ಕಂ ಟ್ಯಾಕ್ಸ್ ಕ್ಲೀಯರನ್ಸ್ ದಸ್ತಾವೇಜುಗಳ ಪ್ರತಿಗಳನ್ನು ಸಲ್ಲಿಸಬೇಕು.
2. ಅಗತ್ಯವಾದ ಮುಂಗಡ ಠೇವಣಿಯನ್ನು (ಇಎಂಡಿ) ಶೆಡ್ಯೂಲ್ಡ್ ರಾಷ್ಟ್ರೀಕೃತ ಬ್ಯಾಂಕುಗಳ ಡಿ.ಡಿ./ ಎಫ್.ಡಿ.ಆರ್/ ಬ್ಯಾಂಕರ್ಸ್ ಚೆಕ್/ ಟಿ.ಡಿ.ಆರ್/ ಬ್ಯಾಂಕ್ ಗ್ಯಾರಂಟಿ/ ಪ್ಲೆಡ್ಜ್ ಮಾಡಿದ ಎನ್.ಎಸ್.ಸಿ. ರೂಪದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರ್, ಸಣ್ಣ ನೀರಾವರಿ ವಿಭಾಗ, ಧಾರವಾಡ ಇವರ ಹೆಸರಿನಲ್ಲಿ ಪಡೆದು ಸಲ್ಲಿಸಬೇಕು.
3. ಗುತ್ತಿಗೆದಾರರು ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ತಮ್ಮ ಮೂಲ ನೋಂದಣಿ ಪುಸ್ತಕ ತರುವುದು.
4. ಟೆಂಡರ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಇ.ಎಂ.ಡಿ. (ಮುಂಗಡ ಠೇವಣಿ) ಯನ್ನು ಟೆಂಡರ್‌ಗಳನ್ನು ತೆರೆದ 90 (ತೊಂಭತ್ತು) ದಿನಗಳ ನಂತರವೇ ಹಿಂದಿರುಗಿಸಲಾಗುವುದು.
5. ಅಂಗೀಕರಿಸಲ್ಪಟ್ಟ ಗುತ್ತಿಗೆದಾರರ ಗುತ್ತಿಗೆ ಮೊತ್ತವು ಟೆಂಡರಿಗಿಟ್ಟ ಮೊತ್ತದ ಶೇಕಡಾ 75ಕ್ಕಿಂತ ಕಡಿಮೆ ಇದ್ದಲ್ಲಿ, ಟೆಂಡರಿಗಿಟ್ಟ ಮೊತ್ತದ ಶೇಕಡಾ 75 ಹಾಗೂ ಅಂಗೀಕೃತ ಗುತ್ತಿಗೆ ಮೊತ್ತದ ವ್ಯತ್ಯಾಸದ ಮೊತ್ತವನ್ನು ಹೊಣೆಗಾರಿಕೆ ಠೇವಣಿಯಾಗಿ, ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ, ಕರಾರು ಒಪ್ಪಂದ ಪೂರ್ವದಲ್ಲಿ ನೀಡಬೇಕು.
6. **ಖಾಲಿ ಟೆಂಡರ್ ಪುಸ್ತಕಗಳಿಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ಈ ಕೆಳಕಂಡ ಅರ್ಹತೆ ಹೊಂದಿರಬೇಕು:**
   1. ಗುತ್ತಿಗೆದಾರರು ಕಳೆದ ಐದು ವರ್ಷಗಳಲ್ಲಿ (2000-01 ರಿಂದ 2004-05ರ ವರೆಗೆ) ಎರಡು ಆರ್ಥಿಕ ವರ್ಷಗಳಿಗೆ ಪ್ರತಿ ವಾರ್ಷಿಕ ಕಾಮಗಾರಿಗಳ ವಹಿವಾಟು ಕನಿಷ್ಠ ರೂ.565.40 ಲಕ್ಷವಿರಬೇಕು. (ಸಿವಿಲ್ ಇಂಜಿನೀಯರಿಂಗ್ ಕೆಲಸಗಳು ಮಾತ್ರ)

2. ಪ್ರಮುಖ ಗುತ್ತಿಗೆದಾರರೆಂದು ಕಳೆದ ಐದು ವರ್ಷಗಳಲ್ಲಿ ಇದೇ ಮಾದರಿಯ ಕನಿಷ್ಠ ಒಂದು ಕಾಮಗಾರಿಯನ್ನು ರೂ.141.35 ಲಕ್ಷಕ್ಕಿಂತ ಕಡಿಮೆ ಇಲ್ಲದಂತೆ ನಿಗದಿತ ಅವಧಿಯಲ್ಲಿ ತೃಪ್ತಿಕರವಾಗಿ ಪೂರ್ಣಗೊಳಿಸಿರಬೇಕು.

ಕಳೆದ ಐದು ವರ್ಷಗಳಲ್ಲಿ ಮಾಡಲಾದ ಆರ್ಥಿಕ ವಹಿವಾಟು ಮತ್ತು ಪೂರ್ಣಗೊಳಿಸಿದ ಕಾಮಗಾರಿಗಳ ಮೊತ್ತ ಪ್ರಸಕ್ತ ಸಾಲಿನ ದರಗಳ ಮಟ್ಟಕ್ಕೆ ಹೋಲಿಸಲು ಆಯಾ ವರ್ಷಗಳಿಗೆ ಪ್ರತಿ ವರ್ಷಕ್ಕೆ 10% ರಷ್ಟು ಹೆಚ್ಚುವರಿ ವೇಟೇಜ್ ಗಣನೆಗೆ ತೆಗೆದುಕೊಳ್ಳಲಾಗುವುದು.

3. ಯಾವುದೇ ಒಂದು ವರ್ಷದಲ್ಲಿ (2001-02 ರಿಂದ 2005-06) ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸ ನಿರ್ವಹಿಸಿರಬೇಕು.

| | |
|---|---|
| ಅ) ಅಗೆತದ ಕೆಲಸ | 93115.00 ಘ.ಮೀ. |
| ಆ) ಸಿಮೆಂಟ್ ಕಾಂಕ್ರೀಟ್ ಕೆಲಸ | 5930.00 ಘ.ಮೀ. |
| ಇ) ಸ್ಟೀಲ್ ಫ್ಯಾಬ್ರಿಕೇಷನ್ | 61.95 ಮೆ.ಟನ್. |
| ಈ) ಏರಿಯಾ ಕೆಲಸ | 24905.00 ಘ.ಮೀ. |

ಮೇಲಿನ ಷರತ್ತುಗಳ ಬಗ್ಗೆ ಕಾರ್ಯನಿರ್ವಾಹಕ ಅಭಿಯಂತರರಿಗಿಂತ ಕಡಿಮೆ ದರ್ಜೆ ಇಲ್ಲದ ಅಧಿಕಾರಿಯಿಂದ ದೃಢೀಕೃತ ದಾಖಲಾತಿಗಳ ಪ್ರತಿಗಳನ್ನು ಲಗತ್ತಿಸುವುದು.

7) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಸ್ವಂತ ಅಥವಾ ಲೀಸ್ ಮೇಲೆ ಹೊಂದಿರಬೇಕು. ಲೀಸ್ ಆಗಿದ್ದಲ್ಲಿ ಜಿ.ಪಿ.ಎ. ಮೂಲ ದಾಖಲಾತಿ ಒದಗಿಸುವುದು.

| | |
|---|---|
| ಅ) ಪೋಕ್ಲೇನ್/ ಎಕ್ಸ್‌ವೇಟರ್/ ಜೆ.ಸಿ.ಬಿ. | 2 ಸಂಖ್ಯೆ |
| ಆ) ಲಾರಿಗಳು/ ಟಿಪ್ಪರ್‌ಗಳು | 8 ಸಂಖ್ಯೆ |
| ಇ) ಕಾಂಕ್ರೀಟ್ ಮಿಕ್ಸರ್ | 6 ಸಂಖ್ಯೆ |
| ಈ) ನೀರು ಎತ್ತುವ ಪಂಪ 10 ಎಚ್.ಪಿ. | 2 ಸಂಖ್ಯೆ |
| ಉ) ವೈಬ್ರೇಟರ್ (ಪಿನ್/ ಟೇಬಲ್) | 6 ಸಂಖ್ಯೆ |
| ಊ) ವಾಟರ್ ಟ್ಯಾಂಕರ್ | 2 ಸಂಖ್ಯೆ |
| ಋ) ಪಾವರ್ ರೋಲರ್ | 1 ಸಂಖ್ಯೆ. |

8) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ, ಚರಾಸ್ತಿ ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ರೂ.84.81 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಲೈನ್ ಆಫ್ ಕ್ರೆಡಿಟ್/ ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣಿಕರಿಸಿದ್ದು) ಒದಗಿಸಬೇಕು.

9) ಈ ಯೋಜನೆಗೆ ಐದು ವರ್ಷಗಳ ಸಿವಿಲ್ ಇಂಜಿನೀಯರಿಂಗ್ ಕಾಮಗಾರಿಗಳ ಇಂತಹದೇ ಅನುಭವವುಳ್ಳ ಒಬ್ಬ ಪ್ರೊಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸಗಳನ್ನು ಮಾಡಿರುವ ಪರಿಣಿತರನ್ನು ಹೊಂದಿರಬೇಕು. ಕೆಲಸಗಾರರ ಹಾಗೂ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ ನೀಡುವುದು.

10) ಗುತ್ತಿಗೆದಾರರು ಕಾಮಗಾರಿಗೆ ಪೂರೈಸಲು ಸಾಕಷ್ಟು ಮಾನವ ಶಕ್ತಿ ಹೊಂದಿರಬೇಕು.

11) ತಾಂತ್ರಿಕ ಬಿಡ್‌ನಲ್ಲಿ ತಿಳಿಸಲಾದ ಎಲ್ಲ ವಿವರಗಳಿಗೆ ಸೂಕ್ತ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರಗಳಿಗೆ ನೋಟರಿ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿರಬೇಕು.

12) ಯಾವುದೇ ಕಾರಣ ನೀಡದೇ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕು ಸಕ್ಷಮ ಪ್ರಾಧಿಕಾರ ಹೊಂದಿರುತ್ತದೆ.

13) ಷರತ್ತಿನ ಟೆಂಡರ್‌ಗಳನ್ನು ಪರಿಗಣಿಸುವುದಿಲ್ಲ.

**ವ್ಹಿ.ವ್ಹಿ. ಶೀರಿ**
ಕಾರ್ಯನಿರ್ವಾಹಕ ಅಭಿಯಂತರು,
ಸಣ್ಣ ನೀರಾವರಿ ವಿಭಾಗ, ಧಾರವಾಡ.

ಪಿ.ಆರ್.744

## ಜಿಲ್ಲಾ ಪೊಲೀಸ್ ಕಛೇರಿ, ಕೋಲಾರ ಚಿನ್ನದ ಗಣಿ ಪ್ರದೇಶ
## ಸಂಖ್ಯೆ: ಅಪರಾಧ(1)/ 76/ 2006, ದಿನಾಂಕ:17ನೇ ನವಂಬರ್, 2006

**ವಿಷಯ:** ಚಾಂಪಿಯನ್ ರೀಪ್ಸ್ ಪೊಲೀಸ್ ಠಾಣೆ, ಮೊ.ಸಂಖ್ಯೆ: 111/ 1999ರ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಆಟೋ ಸಂಖ್ಯೆ: ಎಂ.ವೈ.ಕೆ. 9725 ಮತ್ತು ಯಮಹ ಮೋಟಾರ್ ಸೈಕಲ್ ಸಂಖ್ಯೆ: ಕೆಎ-03-ಇಬಿ-7693 ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮುಖಾಂತರ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಪ್ರಧಾನ ಜೆ.ಎಂ.ಎಫ್.ಸಿ. ಕೆ.ಜಿ.ಎಫ್. ರವರ ಅನುಮತಿ ದಿನಾಂಕ:12.09.2006.

ಮೇಲ್ಕಂಡ ವಿಷಯಕ್ಕೆ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಚಾಂಪಿಯನ್ ರೀಪ್ಸ್ ಪೊಲೀಸ್ ಠಾಣೆ ಮೊ. ಸಂಖ್ಯೆ: 111/1999 ರ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿರುವ ಆಟೋ ಸಂಖ್ಯೆ: ಎಂವೈಕೆ- 9725 ಮತ್ತು ಸಿಮಿಸ್ ಸಂಖ್ಯೆ: 54/ 2005ರಲ್ಲಿ ಯಮಹ ಮೋಟಾರ್ ಸೈಕಲ್ ಸಂಖ್ಯೆ: ಕೆಎ-03-ಇಬಿ7693 ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮುಖಾಂತರ ವಿಲೇವಾರಿ ಮಾಡಿ ಹರಾಜಿನಿಂದ ಬಂದಂತಹ ಹಣವನ್ನು ಮಾನ್ಯ ನ್ಯಾಯಾಲಯಕ್ಕೆ ಜಮಾ ಮಾಡಲು ಮಾನ್ಯ ಆಡಿಷನಲ್ ಸಿ.ಜೆ. ಮತ್ತು ಪ್ರಧಾನ ಜೆ.ಎಂ.ಎಫ್.ಸಿ. ನ್ಯಾಯಾಧೀಶರು ಕೆ.ಜಿ.ಎಫ್. ರವರು ಅನುಮತಿ ನೀಡಿರುತ್ತಾರೆ.

ಆದ್ದರಿಂದ ಆಟೋ ಸಂಖ್ಯೆ: ಎಂವೈಕೆ-9725 ಮತ್ತು ಸಿಮಿಸ್ ಸಂಖ್ಯೆ: 54/ 2005ರಲ್ಲಿ ಯಮಹ ಮೋಟಾರ್ ಸೈಕಲ್ ಸಂಖ್ಯೆ: ಕೆಎ-03-ಇಬಿ-7693 ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ದಿನಾಂಕ:**17.01.2007 ರಂದು ಬೆಳಿಗ್ಗೆ 11.00 ಗಂಟೆಗೆ** ಚಾಂಪಿಯನ್‌ರೀಪ್ಸ್ ಪೊಲೀಸ್ ಠಾಣೆಯಲ್ಲಿ ಈ ಕೆಳಕಂಡ ನಿಬಂಧನೆಗಳೊಂದಿಗೆ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ನಿರ್ಧರಿಸಿದೆ. ಇದನ್ನು ಗೆಜೆಟ್‌ನಲ್ಲಿ ಪ್ರಕಟಪಡಿಸಲು ಕೋರಲಾಗಿದೆ.

### ಟೆಂಡರ್ ಕಂ ಹರಾಜಿನ ನಿಬಂಧನೆಗಳು

1. ಮೊಹರು ಮಾಡಿದ (ಸಿಲ್ಡ್ ಟೆಂಡರ್) ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ಜಿಲ್ಲೆ ರವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆ ಮೇಲೆ ಅಮಾನತ್ತು ಪಡಿಸಿರುವ ಹಳೆಯ ವಾಹನಗಳನ್ನು ಖರೀದಿಸುವ ಬಗ್ಗೆ ಎಂದು ನಮೂದಿಸಬೇಕು.
2. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಎಲ್ಲಾ ಅಹವಾಲುದಾರರು ರೂ.1000/-ಗಳಂತೆ ಠೇವಣಿ ಹಣವನ್ನು ನಗದಾಗಿ: ಡಿ.ಡಿ.ಯನ್ನು ಪೊಲೀಸ್ ಅಧೀಕ್ಷಕರು ಕೆ.ಜಿ.ಎಫ್. ರವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೇ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಬರೆದಿರಬೇಕು. ಟೆಂಡರ್ ಫಾರಂನಲ್ಲಿ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದರೆ ಆ ಸ್ಥಳದಲ್ಲಿ ಪೂರ್ಣ ಸಹಿ ಮಾಡಬೇಕು.
4. ಟೆಂಡರ್ ಫಾರಂಗಳನ್ನು ಒಬ್ಬರಿಂದ ವರ್ಗಾವಣೆ ಮಾಡಲಾಗುವುದಿಲ್ಲ.

5. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ:16.01.2007ರಂದು ಸಂಜೆ 5 ಗಂಟೆಯ ಒಳಗಾಗಿ ಈ ಕಛೇರಿಗೆ ಕಳುಹಿಸತಕ್ಕದ್ದು. ತಡವಾಗಿ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
6. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಎಲ್ಲರೂ. ರೂ.1000/-ಗಳನ್ನು ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸಬಹುದು. ಠೇವಣಿ ಇಲ್ಲದವರನ್ನು ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
7. ಸವಾಲುದಾರರು ಠೇವಣಿ ಹಣವನ್ನು (ರೂ.1000/- ಗಳನ್ನು) 2006ರ ಬೆಳಿಗ್ಗೆ 11.00 ಗಂಟೆಯೊಳಗೆ ಪಾವತಿಸತಕ್ಕದ್ದು. ಹರಾಜು ಟೆಂಡರ್ ಪ್ರಾರಂಭವಾದ ನಂತರ ಸವಾಲುದಾರರಿಂದ ಠೇವಣಿ ಹಣವನ್ನು ಪಡೆಯುವುದಿಲ್ಲ ಹಾಗೂ ಠೇವಣಿ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವುದಿಲ್ಲ.
8. ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ಕಂ ಟೆಂಡರ್ ಅನ್ನು ನಡೆಸುವರು.
9. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಯನ್ನು ದಾಖಲುಗೊಳಿಸಿದ ನಂತರ ದೃಢೀಕೃತವಾದ ಟೆಂಡರ್‌ಗಳನ್ನು ಪೊಲೀಸ್ ಅಧೀಕ್ಷಕರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗ ಪಡಿಸುವುದು, ಈ ಎರಡರಲ್ಲಿ ಅತಿ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್‌ದಾರರ ಹರಾಜುದಾರರು ಎಂದು ಪರಿಗಣಿಸಲಾಗುವುದು.
10. ಯಶಸ್ವಿಯಾದ ಟೆಂಡರ್‌ದಾರರು: ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡಾ 25ರಷ್ಟು ಹಣವನ್ನು (ಠೇವಣಿ ಬಿಟ್ಟು) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು 7 ದಿನಗಳೊಳಗಾಗಿ ಸಂಪೂರ್ಣವಾಗಿ ವ್ಯಾಟ್‌ನೊಂದಿಗೆ ಪಾವತಿ ಮಾಡಿದ ನಂತರ ಹರಾಜು ಮಾಡಲಾದ ವಸ್ತುಗಳನ್ನು ತಮ್ಮ ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಗುವುದು. ತಪ್ಪಿದಲ್ಲಿ ಅವರು ತುಂಬಿದ ಶೇಕಡಾ 25ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮೊತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಸದರಿ ವಸ್ತುಗಳನ್ನು ಮರು ಹರಾಜು ಮಾಡಲಾಗುವುದು.
11. ಹಣವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ರವರ ಕಛೇರಿಗೆ ನಗದು ರೂಪದಲ್ಲಿ ಪಾವತಿಸತಕ್ಕದ್ದು, ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
12. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್: ಸವಾಲುದಾರ ಠೇವಣಿ ಹಣವನ್ನು ಟೆಂಡರ್ ಮುಕ್ತಾಯದ ಕೂಡಲೇ ಹಿಂತಿರುಗಿಸಲಾಗುವುದು.
13. ಸರ್ಕಾರಿ ಹರಾಜಿನಲ್ಲಿ ಭಾಗವಹಿಸಿದ ಸವಾಲುದಾರರು ಸರ್ಕಾರಿ ನಿಯಮಗಳನ್ನು ಚಾಚು ತಪ್ಪದೇ ಪಾಲಿಸತಕ್ಕದ್ದು.
14. ಹಳೆ ವಾಹನಗಳ ಮೇಲಿನ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ ನಿಯಮಗಳ ಮೇಲೆ ವಸೂಲಿ ಮಾಡಲಾಗುವುದು.
15. ಟೆಂಡರ್: ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಟೆಂಡರ್: ಬಿಡ್‌ದಾರರು ಅವರ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್‌ದಾರರು ಬಿಡ್‌ದಾರರು ಮುಂಗಡವಾಗಿ ಕಟ್ಟಲಾದ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್ ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ಹಾಗೂ ಅಂತಹ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲೆ ಜಮಾಮಾಡತಕ್ಕದ್ದು. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
16. ಹರಾಜಿನಲ್ಲಿ ಯಾವುದೇ ಟೆಂಡರ್: ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಕೆ.ಜಿ.ಎಫ್. ರವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮವಾದದ್ದು.
17. ಮೇಲೆ ತಿಳಿಸಿರುವ ಹರಾಜಿನಲ್ಲಿ ಯಾವುದೇ ವಾದವಿವಾದ ಉದ್ಭವಿಸಿದಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಪ್ರಧಾನ ಜೆ.ಎಂ.ಎಫ್.ಸಿ. ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
18. ಇಚ್ಛೆಯುಳ್ಳ ಟೆಂಡರ್: ಸವಾಲುದಾರರು ಹರಾಜು ಮಾಡಲಿರುವ ವಾಹನಗಳನ್ನು ಚಾಂಪಿಯನ್ ರೀಫ್ಸ್ ಪೊಲೀಸ್ ಠಾಣೆಯಲ್ಲಿ ಪರಿಶೀಲಿಸಬಹುದು.
19. ವಾಹನಗಳು ಯಾವ ಸ್ಥಿತಿಯಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹಸ್ತಾಂತರಿಸಲಾಗುವುದು. ಹಾಗೂ ಯಾವುದೇ ಸಾಗಾಣಿಕೆ ಸೌಕರ್ಯವನ್ನು ಕಲ್ಪಿಸಲಾಗುವುದಿಲ್ಲ.

ಪೊಲೀಸ್ ಅಧೀಕ್ಷಕರು,
ಕೋಲಾರ ಚಿನ್ನದ ಗಣಿ ಪ್ರದೇಶ.

ಪಿ.ಆರ್.745

**ಆರ್ಥಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಇ 125 ವಾತೆಸಿ 2006, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್, 2006**

**ನಮೂನೆ-1**

**(9ನೇ ನಿಯಮ ನೋಡಿ)**

ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಪರೀಕ್ಷಾರ್ಥ), ಎಲ್.ವಿ.ಓ. -40, ಡಿ.ಐ.ವಿ. -2, ಮಲ್ಲೇಶ್ವರಂ, ಬೆಂಗಳೂರು ಆಗಿ ಕಾರ್ಯನಿರ್ವಹಿಸುತ್ತಿರುವ **ಶ್ರೀ ಲಿಂಗಣ್ಣ ಕುಚಬಾಳ್** ಇವರು ತಮ್ಮ ಹೆಸರನ್ನು **"ಲಿಂಗಣ್ಣ ಗುಂಡಳ್ಳಿ"** ಎಂದು ಬದಲಾವಣೆ ಮಾಡಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಡಿ.206

**ಆಲಿಸ್ ಗೊನ್ಸಾಲ್ವಿಸ್**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾ.ತೆ. -2).

**ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಸಂಖ್ಯೆ: 05/ ಲೆಕ್ಕ (3) ಎಂಟಿ: 2006-07, ದಿನಾಂಕ:20ನೇ ನವಂಬರ್, 2006**

**ಬಹಿರಂಗ ಹರಾಜು ಮುಂದೂಡಿಕೆ**

**ವಿಷಯ:** ಬೆಂಗಳೂರು ಜಿಲ್ಲೆಯ ಪೊಲೀಸ್ ಇಲಾಖೆಯ ನಿರುಪಯುಕ್ತಗೊಳಿಸಲಾಗಿರುವ 23 ವಾಹನಗಳನ್ನು ಟೆಂಡರ್ ಕಂ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಬೆಂಗಳೂರು ಜಿಲ್ಲೆಯ ಪೊಲೀಸ್ ಇಲಾಖೆಯ ಈ ಕೆಳಕಂಡ ವಾಹನಗಳನ್ನು ದಿನಾಂಕ:20.11.2006 **ಬೆಳಿಗ್ಗೆ 9.00 ಗಂಟೆಗೆ** ಬೆಂಗಳೂರು ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಬ್ಯಾಡರಹಳ್ಳಿ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದೆಂದು ಉಲ್ಲೇಖ-2ರಲ್ಲಿ ಬಹಿರಂಗ ಹರಾಜು ಪ್ರಕಟಣೆಯನ್ನು ಹೊರಡಿಸಲಾಗಿತ್ತು. ಬಹಿರಂಗ ಹರಾಜನ್ನು ಆಡಳಿತಾತ್ಮಕ ಕಾರಣಗಳಿಂದ, ದಿನಾಂಕ:30.01.2007ರಂದು ಈ ಹಿಂದೆ ನಿಗದಿಪಡಿಸಿದ ಸ್ಥಳದಲ್ಲೇ ಕೈಗೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಪೊಲೀಸ್ ಸೂಪರಿಂಟೆಂಡೆಂಟ್,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.750

**ಕರ್ನಾಟಕ ವಿಧಾನ ಸಭೆ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಕವಿಸಸ/ ಆ-1/ 27/ ಮಗುನೇ/ 2006, ದಿನಾಂಕ:28ನೇ ನವಂಬರ್, 2006**

**ವಿಷಯ:** ಕರ್ನಾಟಕ ವಿಧಾನ ಸಭೆ ಸಚಿವಾಲಯದ ಶಾಸಕರ ಭವನದ ಹೆಲ್ತ್ ಕ್ಲಬ್‌ಗೆ ಎರಡು ಮಸಾಜರ್ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ಮಾತ್ರ ಭರ್ತಿ ಮಾಡುವ ಬಗ್ಗೆ.

1. ಅರ್ಜಿಗಳನ್ನು ದಿನಾಂಕ:23.12.2006ರೊಳಗಾಗಿ ಸಲ್ಲಿಸಬೇಕು.

2. ಅರ್ಜಿ ಸಲ್ಲಿಸಬೇಕಾದ ವಿಳಾಸ: ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ ಅಂಚೆ ಪೆಟ್ಟಿಗೆ ಸಂಖ್ಯೆ: 5074, ವಿಧಾನ ಸೌಧ, ಬೆಂಗಳೂರು-560 001.

3. ಕರ್ನಾಟಕ ವಿಧಾನ ಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 2003ರನ್ವಯ ಶಾಸಕರ ಭವನದ ಹೆಲ್ತ್ ಕ್ಲಬ್‌ಗೆ ಮಸಾಜರ್ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಈ ಅಧಿಸೂಚನೆಯ ಜೊತೆಗೆ ಗೊತ್ತುಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ನಿಗದಿತ ದಿನಾಂಕದೊಳಗಾಗಿ ಸಲ್ಲಿಸಬೇಕು.

| ಹುದ್ದೆಯ ಹೆಸರು | ಖಾಲಿಯಿರುವ ಹುದ್ದೆಗಳು | ಕ್ರೋಢೀಕೃತ ವೇತನ ರೂ.ಗಳಲ್ಲಿ | ವರ್ಗೀಕರಣ |
|---|---|---|---|
| ಮಸಾಜರ್ | 02 | 3050-00<br>(ಎಲ್ಲಾ ಭತ್ಯೆಗಳು ಸೇರಿ) | 01 ಹುದ್ದೆ ಪುರುಷರಿಗೆ<br>01 ಹುದ್ದೆ ಮಹಿಳೆಯರಿಗೆ |

**4. ವಿದ್ಯಾರ್ಹತೆ:** 7ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು.

**ಅನುಭವ:** ಯಾವುದೇ ಹೆಲ್ತ್‌ಕ್ಲಬ್‌ನಲ್ಲಿ ಮಸಾಜರ್ ಆಗಿ ಕನಿಷ್ಠ 5 ವರ್ಷಗಳ ಅನುಭವ ಹೊಂದಿರಬೇಕು.

**5. ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ಗೊತ್ತುಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಗೊಳಪಟ್ಟಿರಬೇಕು.

| ಪ್ರವರ್ಗ | ಕನಿಷ್ಠ | ಗರಿಷ್ಠ |
|---|---|---|
| 1. ಪರಿಶಿಷ್ಠ ಜಾತಿ/ ಪರಿಶಿಷ್ಠ ಪಂಗಡಗಳು ಮತ್ತು ಪ್ರವರ್ಗ-I | 18 | 38 |
| 2. ಪ್ರವರ್ಗ-II (ಎ) (ಬಿ) ಪ್ರವರ್ಗ-III (ಎ) (ಬಿ) | 18 | 36 |
| 3. ಸಾಮಾನ್ಯ | 18 | 33 |

6. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ, ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

7. ಆಯ್ಕೆಯಾದ ಯಾವುದೇ ಅಭ್ಯರ್ಥಿಯು, ನೇಮಕಾತಿ ಪ್ರಾಧಿಕಾರಕ್ಕೆ ಅವನು/ ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಯೋಗ್ಯವೆನಿಸಿದ ಹೊರತು ಅವರನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

8. ಯಾವುದೇ ಅಭ್ಯರ್ಥಿಯು ತನ್ನ ಉಮೇದುವಾರಿಕೆ ಬಗ್ಗೆ ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಯು ಸದರಿ ಹುದ್ದೆಯ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**9. ಅರ್ಜಿ ಶುಲ್ಕ:**

(ಅ) ಪರಿಶಿಷ್ಠ ಜಾತಿ/ ಪರಿಶಿಷ್ಠ ಪಂಗಡ ಹಾಗೂ ಪ್ರವರ್ಗ-1 ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕವಿರುವುದಿಲ್ಲ.

(ಆ) ಇತರೆ ಅಭ್ಯರ್ಥಿಗಳು: ರೂ.5.00 ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರನ್ನು (ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಖರೀದಿಸಿದ) ಪ್ರಧಾನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ:5074, ವಿಧಾನ ಸೌಧ, ಬೆಂಗಳೂರು-560 001 ಈ ವಿಳಾಸಕ್ಕೆ ಪಾವತಿ ಮಾಡಬೇಕು.

10. ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ದ್ವಿಪ್ರತಿಗಳನ್ನು ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ.

(ಆ) 7ನೇ ತರಗತಿಯಲ್ಲಿ ಉತ್ತೀರ್ಣರಾದ ಬಗ್ಗೆ ಅಂಕ ಪಟ್ಟಿಯ ನಕಲು ಪ್ರತಿ.

(ಇ) ನಡವಳಿಕೆಯ ಪ್ರಮಾಣ ಪತ್ರ.

(ಈ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಇತ್ತೀಚಿಗೆ ಸರ್ಕಾರದಿಂದ ನಿಗದಿಗೊಳಿಸಲ್ಪಟ್ಟಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(ಉ) ಯಾವುದೇ ಹೆಲ್ತ್ ಕ್ಲಬ್‌ನಲ್ಲಿ ಮಸಾಜರ್ ಆಗಿ ಕನಿಷ್ಠ 5 ವರ್ಷಗಳ ಕಾರ್ಯನಿರ್ವಹಿಸಿರುವ ಅನುಭವ ಪ್ರಮಾಣ ಪತ್ರ.

**ಸೂಚನೆ:** ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸಬಾರದು.

11. ಅರ್ಜಿಗಳನ್ನು ನಿಗದಿತ ಅರ್ಜಿ ನಮೂನೆಯ ದ್ವಿಪ್ರತಿಯಲ್ಲಿ, ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕ:23.12.2006ರಂದು ಸಂಜೆ 4.00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು, ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

12. ಈ ಹುದ್ದೆಗಳಿಗೆ ಮಾಡುವ ನೇಮಕಾತಿಯು ತಾತ್ಕಾಲಿಕವಾಗಿದ್ದು, ಒಂದು ವರ್ಷದ ಅವಧಿಗೆ ಮಾತ್ರ ಇರುತ್ತದೆ. ಯಾವುದೇ ಸಮಯದಲ್ಲಿ ಆಯ್ಕೆಯಾದ ಅಭ್ಯರ್ಥಿಯ ಸೇವೆಯನ್ನು ಮುಕ್ತಾಯಗೊಳಿಸಬಹುದಾಗಿರುತ್ತದೆ. ಆಯ್ಕೆಯಾದ ಅಭ್ಯರ್ಥಿಯು ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ನಂತರ ಬರೆದುಕೊಡುವ ಮುಚ್ಚಳಿಕೆಯನ್ನು (ಗುತ್ತಿಗೆ ಆಧಾರದ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ) ರೂ.50.00 ಗಳ ಛಾಪಾ ಕಾಗದದ ಮೇಲೆ ಬರೆದುಕೊಡಬೇಕು.

**ಸೂಚನೆ:**

1) ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

2) ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ ಹಾಗೂ ಲೋಪ/ ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3) ಅರ್ಜಿಗಳ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.

4) ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸಭಾಧ್ಯಕ್ಷರ ಆದೇಶಾನುಸಾರ,
**ಕೆ. ಚಿನ್ನಸ್ವಾಮಿ**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ.

**ಅರ್ಜಿ ನಮೂನೆ**

| ಅಭ್ಯರ್ಥಿಯ<br>ಇತ್ತೀಚಿನ ಭಾವಚಿತ್ರ |
|---|

ಕರ್ನಾಟಕ ವಿಧಾನ ಸಭೆ ಸಚಿವಾಲಯದ ಅಧಿಸೂಚನೆ ಸಂಖ್ಯೆ: ಕವಿಸಸ/ ಆ-1/ 27/ ಮಗುನೇ/ 2006, ದಿನಾಂಕ:28.12.2006ರ ಪ್ರಕಾರ ಶಾಸಕರ ಭವನದ ಹೆಲ್ತ್ ಕ್ಲಬ್‌ನಲ್ಲಿ ಮಸಾಜರ್ ಹುದ್ದೆಗೆ ಕೋರಿ ಸಲ್ಲಿಸಿರುವ ಅರ್ಜಿ.

1. ಅಭ್ಯರ್ಥಿಯ ಪೂರ್ಣ ಹೆಸರು :
(ದಪ್ಪ ಅಕ್ಷರಗಳಲ್ಲಿ)
2. ತಂದೆಯ ಹೆಸರು :
3. ಹುಟ್ಟಿದ ದಿನಾಂಕ :
4. ಪೂರ್ಣ ವಿಳಾಸ :
5. ವಿದ್ಯಾರ್ಹತೆ :
6. ಅನುಭವ :
7. ಜಾತಿ/ ಪಂಗಡ :
8. ಇತರೆ ಹೇಳಲಿಚ್ಛಿಸುವ ಮಾಹಿತಿ :
(ದಾಖಲೆಗಳ ಸಮೇತ)

ಸ್ಥಳ: ಅಭ್ಯರ್ಥಿಯ ಸಹಿ
ದಿನಾಂಕ:

ಸಭಾಧ್ಯಕ್ಷರ ಆದೇಶಾನುಸಾರ,
**ಕೆ. ಚಿನ್ನಸ್ವಾಮಿ**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ.

ಪಿ.ಆರ್.752

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**
**ಟೆಂಡರ್ ಅಧಿಸೂಚನೆ**
**ಸಂಖ್ಯೆ: ಸಿಆಸುಇ 134 ಡಿಸಭೆ 2006, ಬೆಂಗಳೂರು, ದಿನಾಂಕ:23ನೇ ನವಂಬರ್, 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆ: ಸಮಾರಂಭಗಳು ಮತ್ತು ರಾಜಭವನದಲ್ಲಿ ನಡೆಯುವ ಪ್ರತಿಜ್ಞಾ ಸ್ವೀಕಾರ ಸಮಾರಂಭ ಇತ್ಯಾದಿಗಳಿಗೆ ಧ್ವನಿವರ್ಧಕ ವ್ಯವಸ್ಥೆ, ಧ್ವನಿಮುದ್ರಿತ ಶಾಸ್ತ್ರೀಯ ಸಂಗೀತ ಮತ್ತು ಇತರ ಎಲೆಕ್ಟ್ರಾನಿಕ್ ಉಪಕರಣಗಳನ್ನು ದರ ಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಪಡೆಯುವ ಬಗ್ಗೆ ದಿನಾಂಕ:01.01.2007 ರಿಂದ 31.12.2007ರ ಒಂದು ವರ್ಷದ ಅವಧಿಗೆ ನೀಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ದ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

ಈ ಸಂಬಂಧ ಅವಶ್ಯಕ ಉಪಕರಣಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ:

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ ರೂ.ಪೈ. |
|---|---|---|
| 1. | ಕಾಲಂ ಸ್ಪೀಕರ್ 60 ಡಬ್ಲ್ಯೂ 100 ವಿ (ಇನ್‌ಡೋರ್) | |
| 2. | ಹೆವಿ ಡ್ಯೂಟಿ ಸ್ಪೀಕರ್ ವಿತ್ ಎಲ್‌ಎಂಯು 12", 200 ಡಬ್ಲ್ಯೂ | |
| 3. | ಸ್ಪೀಕರ್ ಕೇಬಲ್ (ಮಿನಿಮಂ 200 ಫೀಟ್ ಲೆನ್ಸ್) | |
| 4. | 2.5 ಕೆ.ವಿ.ಎ. ಜನರೇಟರ್ per day | |
| 5. | ಟೈಮ್ ಡಿಲೇ: ಎಕೋ ಯುನಿಟ್ | |
| 6. | ಪ್ರಿ-ಆಂಪ್ಲಿಫೈಯರ್ 6 ಚಾನಲ್ | |
| 7. | ಪ್ರಿ-ಆಂಪ್ಲಿಫೈಯರ್ 12 ಚಾನಲ್ | |
| 8. | ಪವರ್ ಆಂಪ್ಲಿಫೈಯರ್ 100 ವ್ಯಾಟ್ಸ್ | |
| 9. | ಪವರ್ ಆಂಪ್ಲಿಫೈಯರ್ 200 ವ್ಯಾಟ್ಸ್ | |
| 10. | ಪವರ್ ಆಂಪ್ಲಿಫೈಯರ್ 300 ವ್ಯಾಟ್ಸ್ | |
| 11. | ಪವರ್ ಆಂಪ್ಲಿಫೈಯರ್ (ಬೂಸ್ಟರ್) 600 ವ್ಯಾಟ್ಸ್ | |
| 12. | ಕಾಲಂ ಸ್ಟ್ರಕ್ಚರ್ 25 ಫೀಟ್ (if required) | |
| 13. | ಬ್ಯಾಟರಿ ಸ್ಟೇಷನ್ 24 ವ್ಯಾಟ್ಸ್ ಡಿ.ಸಿ. per day | |
| 14. | ಹೆವಿ ಡ್ಯೂಟಿ ಔಟ್ ಡೋರ್ ಯೂನಿಟ್ ಫಾರ್ ಹಾರನ್ 40 ವ್ಯಾಟ್ಸ್ | |
| 15. | ಲೈನ್ ಮ್ಯಾಚಿಂಗ್ ಯೂನಿಟ್ | |
| 16. | ರೆಕಾರ್ಡಿಂಗ್: ಪ್ಲೇಬ್ಯಾಕ್ ಡೆಕ್ | |
| 17. | ಟ್ರಂಪ್ಟ್ ಹಾರನ್ ಫಾರ್ ಔಟ್ ಡೋರ್ | |

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ ರೂ.ಪೈ. |
|---|---|---|
| 18. | ಫಾರ್ ಸಿ 60 ಕ್ಯಾಸೆಟ್ (ಫಾರ್ ಆಡಿಯೋ ರೆಕಾರ್ಡಿಂಗ್ ಇನ್‌ಕ್ಲೂಡಿಂಗ್ ಲೇಬರ್ ಚಾರ್ಜಸ್) | |
| 19. | ಪವರ್ ಸಪ್ಲೈ ಯೂನಿಟ್, ಎಲ್‌ಬಿಡಿ 8774 | |
| 20. | ಚೇರ್‌ಮನ್ ಯೂನಿಟ್, ಎಲ್‌ಬಿಡಿ 8781 | |
| 21. | ಡೆಲಿಗೇಟ್ ಯೂನಿಟ್ ಎಲ್‌ಬಿಡಿ 8782 | |
| 22. | ಸೆಕ್ರೆಟರಿ ಯೂನಿಟ್ ಎಲ್‌ಬಿಡಿ 8783 | |
| 23. | ಮೈಕ್ ಎಕ್ಸ್‌ಟೆನ್‌ಷನ್ ಯೂನಿಟ್ ಎಲ್‌ಬಿಡಿ 8784 | |
| 24. | 2.5 ಕೆ.ವಿ.ಎ. ಸ್ಟೆಬಿಲೈಜರ್ | |
| 25. | ಮೈಕ್ ವಿತ್ 25 ಫೀಟ್ ಕೇಬಲ್ ಅಂಡ್ ಎಂಡ್ ಕನೆಕ್ಟರ್ | |
| 26. | ಮಲ್ಟಿ ಕೋಡ್ ಕೇಬಲ್ ಜಿ.ಬಿ. | |
| 27. | ಎಫ್.ಎಂ. ಮೈಕ್ ವಿತ್ ರಿಸೀವರ್ | |
| 28. | ಹೈಟೆಡ್ ಸ್ಟ್ಯಾಂಡ್ ವಿತ್ 1000 ವ್ಯಾಟ್ಸ್ ಸ್ಪೀಕರ್ | |

ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳು ಈ ಕೆಳಗಿನಂತೆ ಇವೆ:

1. ಮೊಹರಾದ ಟೆಂಡರ್ ಲಕೋಟೆ ಮೇಲೆ "ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡು ದರ ಗುತ್ತಿಗೆ" ಎಂದು ಬರೆದಿರತಕ್ಕದ್ದು.
2. ಸಲ್ಲಿಸಿರುವ ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.5,000/- (ರೂಪಾಯಿ ಐದು ಸಾವಿರಗಳು ಮಾತ್ರ) ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು.
3. ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ:23.12.2006ರ ಮಧ್ಯಾಹ್ನ 3.00 ಗಂಟೆ, ಟೆಂಡರ್‌ಗಳನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು ಇಲ್ಲಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
5. ಈ ಟೆಂಡರ್‌ಗಳನ್ನು ದಿನಾಂಕ:23.12.2006ರ ಮಧ್ಯಾಹ್ನ 3.30 ಗಂಟೆಗೆ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ 23, ವಿಧಾನಸೌಧ, ಬೆಂಗಳೂರು ಇವರ ಕಛೇರಿಯಲ್ಲಿ ತೆರೆಯಲಾಗುವುದು.
6. ನಮೂದಿಸಿರುವ ದರಗಳಲ್ಲಿ ಉಪಕರಣಗಳ ಸಾಗಾಣಿಕೆ ವೆಚ್ಚ ಮತ್ತು ಕಾರ್ಮಿಕ ವೆಚ್ಚವೂ ಸೇರಿರತಕ್ಕದ್ದು.
7. ಉಪಕರಣಗಳನ್ನು 2ನೇ ದಿನ ಅಥವಾ ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ, ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇ.25ರಷ್ಟು ರಿಯಾಯಿತಿ ನೀಡತಕ್ಕದ್ದು.
8. ಒಳ್ಳೆಯ ಗುಣಮಟ್ಟದ ಉಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು.
9. ಅವಶ್ಯಕತೆಗನುಸಾರವಾಗಿ **ರಜಾ ದಿನಗಳಲ್ಲೂ ಹಾಗೂ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ** ಸಹ ಧ್ವನಿವರ್ಧಕ ವ್ಯವಸ್ಥೆ ಮತ್ತು ಶಾಸ್ತ್ರೀಯ ಸಂಗೀತ ವ್ಯವಸ್ಥೆಯನ್ನು ಮಾಡಲು ಸಂಸ್ಥೆಯು ಸಿದ್ಧವಿರತಕ್ಕದ್ದು.
10. ಸಭೆ: ಸಮಾರಂಭಗಳಲ್ಲಿ ಧ್ವನಿವರ್ಧಕ ವ್ಯವಸ್ಥೆ ಮಾಡಿ ಅನುಭವವಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
11. ಉತ್ತಮ ಗುಣಮಟ್ಟದ ಉಪಕರಣಗಳನ್ನು ಉಪಯೋಗಿಸಿಕೊಂಡು ತೃಪ್ತಿಕರವಾಗಿ ಧ್ವನಿವರ್ಧಕ ವ್ಯವಸ್ಥೆಯನ್ನು ಏರ್ಪಾಡು ಮಾಡಲು ವಿಫಲರಾದಲ್ಲಿ, ಅವಧಿಗೆ ಮೊದಲೇ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.
12. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ಬಾಕಿ/ ದೂರು ಇಲ್ಲದಿದ್ದಲ್ಲಿ, ಈ ಮೊತ್ತವನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
13. ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೇ ಸಿದ್ಧಗೊಳಿಸಲು ಶಕ್ತರಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
14. ಗುತ್ತಿಗೆ ಅವಧಿಯು ದಿನಾಂಕ:01.01.2007 ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
15. ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.
16. ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
17. ಯಾವುದೇ ಕಾರಣವನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
18. ಯಶಸ್ವಿ ಟೆಂಡರ್‌ದಾರರು ಆದೇಶ ನೀಡಿದ 15 ದಿನಗಳೊಳಗೆ ನಿಗದಿತ ಮೊತ್ತದ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಸಹಿ ಮಾಡಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ರವಿಮೂರ್ತಿ**

ಪಿ.ಆರ್.751

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).